KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೫, ೨೦೦೯ (ಆಶ್ವಯುಜ ೨೩, ಶಕ ವರ್ಷ ೧೯೩೧) | ಸಂಚಿಕೆ ೪೧ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾದಂಡಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

**ವಿಷಯ:** ತುಮಕೂರು ಜಿಲ್ಲೆಯಲ್ಲಿ ಕೆಎಸ್‌ಆರ್‌ಟಿಸಿ ಬಸ್ ನಿಲ್ದಾಣದ ಸುತ್ತಾಮುತ್ತಾ ಖಾಸಗಿ ವಾಹನಗಳ ನಿಲುಗಡೆಯನ್ನು ನಿಷೇಧಿಸುವ ಕುರಿತು.

**ಉಲ್ಲೇಖ:**1) ವಿಭಾಗೀಯ ನಿಯಂತ್ರಣಾಧಿಕಾರಿಗಳು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ನಿಗಮ ತುಮಕೂರು ಇವರ ಪತ್ರದ ಸಂ. ಕರಾಸಾ/ತುವಿ/ಸಂ/ಕಾ 1915/09–10 ದಿನಾಂಕ:26.08.2009.

2) ದಿನಾಂಕ: 26.08.2009 ರಂದು ಕೆಎಸ್‌ಆರ್‌ಟಿಸಿ ಇಲಾಖೆಯ ವತಿಯಿಂದ ಸುಗಮಸಾರಿಗೆ ಸಂಸ್ಥೆ ಸಂಬಂಧ ನಡೆದ ಪೂರ್ವಭಾವಿ ಸಭೆ ಮೇರೆಗೆ.

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ತುಮಕೂರು ವಿಭಾಗದ ವಿಭಾಗೀಯ ನಿಯಂತ್ರಣಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ತುಮಕೂರು ಜಿಲ್ಲೆಯಲ್ಲಿ ಜಿಲ್ಲಾ ಕೇಂದ್ರ ತಾಲ್ಲೂಕು ಕೇಂದ್ರಗಳ ಹಾಗೂ ಹೋಬಳಿ ಕೇಂದ್ರಗಳಲ್ಲಿರುವ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ ನಿಲ್ದಾಣದ ಮುಂಭಾಗದಲ್ಲಿ ಖಾಸಗಿ ಬಸ್ಸು ಟೆಂಪೋ ಮತ್ತು ಟ್ರ್ಯಾಕ್ಸ್‌ಗಳನ್ನು ನಿಲ್ಲಿಸುವುದರಿಂದ ಸಾರ್ವಜನಿಕರಿಗೆ ಸಂಚಾರಕ್ಕೆ ತೊಂದರೆಯಾಗುತ್ತದೆ. ಅಲ್ಲದೆ ವಾಹನಗಳ ಅಪಘಾತಗಳು ಆಗುವ ಸಾಧ್ಯತೆಗಳು ಇರುವುದರಿಂದ ಜಿಲ್ಲಾ ಕೇಂದ್ರದಲ್ಲಿರುವ ಕೆಎಸ್‌ಆರ್‌ಟಿಸಿ ಬಸ್ ನಿಲ್ದಾಣದ ಸುತ್ತಾಮುತ್ತಾ 500 ಮೀಟರ್ ಅಂತರದಲ್ಲಿ ತಾಲ್ಲೂಕು ಕೇಂದ್ರಗಳ ಹಾಗೂ ಹೋಬಳಿ ಕೇಂದ್ರಗಳಲ್ಲಿರುವ ಕೆಎಸ್‌ಆರ್‌ಟಿಸಿ ಬಸ್ ನಿಲ್ದಾಣದ ಸುತ್ತಾಮುತ್ತಾ 300 ಮೀಟರ್ ವ್ಯಾಪ್ತಿಯಲ್ಲಿ ಖಾಸಗಿ ಬಸ್ ಟೆಂಪೋ ಮತ್ತು ಟ್ರಾಕ್ಸ್‌ಗಳು ಹಾಗೂ ಇನ್ನಿತರ ಖಾಸಗಿ ಪ್ರಯಾಣಿಕರ ವಾಹನಗಳ ನಿಲುಗಡೆಯನ್ನು ನಿಷೇಧಿಸಿ ಆದೇಶ ನೀಡಲು ಕೋರಿರುತ್ತಾರೆ.

ಈ ಬಗ್ಗೆ ದಿನಾಂಕ:26.08.2009 ರಂದು ಸುಗಮ ಸಾರಿಗೆ ವ್ಯವಸ್ಥೆ ಸಂಬಂಧ ನಡೆದ ಪೂರ್ವಭಾವಿ ಸಭೆಯಲ್ಲಿ ಚರ್ಚಿಸಿ ತೆಗೆದುಕೊಂಡ ತೀರ್ಮಾನದಂತೆ ಹಾಗೂ ಉಲ್ಲೇಖ (1)ರ ಪತ್ರದಲ್ಲಿ ಕರ್ನಾಟಕ ರಾಜ್ಯರಸ್ತೆ ಸಾರಿಗೆ ಸಂಸ್ಥೆಯ ನಿಗಮ ತುಮಕೂರು ವಿಭಾಗದ ವಿಭಾಗೀಯ ನಿಯಂತ್ರಣಾಧಿಕಾರಿಗಳವರು ಸಲ್ಲಿಸಿರುವ ವರದಿಯನ್ನು ಪರಿಶೀಲಿಸಲಾಗಿ ಸಾರ್ವಜನಿಕ ಪ್ರಯಾಣಿಕರಿಗೆ ಸಂಚಾರಕ್ಕೆ ತೊಂದರೆಯಾವುದನ್ನು ಹಾಗೂ ವಾಹನಗಳ ಅಪಘಾತಗಳನ್ನು ತಪ್ಪಿಸುವ ದೃಷ್ಟಿಯಿಂದ ತುಮಕೂರು ಜಿಲ್ಲಾ ಕೇಂದ್ರ ಹಾಗೂ ತಾಲ್ಲೂಕು ಕೇಂದ್ರಗಳ ಮತ್ತು ಹೋಬಳಿ ಕೇಂದ್ರಗಳಲ್ಲಿರುವ ಕೆಎಸ್‌ಆರ್‌ಟಿಸಿ ಬಸ್ ನಿಲ್ದಾಣಗಳ ಸುತ್ತಾಮುತ್ತಾ ಪ್ರದೇಶದಲ್ಲಿ ಖಾಸಗಿ ವಾಹನಗಳ ನಿಲುಗಡೆಯನ್ನು ಸಂಪೂರ್ಣವಾಗಿ ನಿಷೇಧಿಸಲು ಮನಗಂಡು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಎಂಎಜಿ(1) ಸಿಆರ್ 73/2009–2010, ದಿನಾಂಕ:28ನೇ ಆಗಸ್ಟ್, 2009**

ಡಾ: ಸಿ. ಸೋಮಶೇಖರ, ಭಾ.ಆ.ಸೇ., ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿ ಆದ ನಾನು 1963ರ ಕರ್ನಾಟಕ ಪೊಲೀಸ್ ಕಾಯ್ದೆ ಕಲಂ 31(1)(ಬಿ) ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ತುಮಕೂರು ಜಿಲ್ಲಾ ಕೇಂದ್ರದಲ್ಲಿರುವ ಕೆಎಸ್‌ಆರ್‌ಟಿಸಿ ಬಸ್ ನಿಲ್ದಾಣದ ಸುತ್ತಮುತ್ತ 500 ಮೀಟರ್ ವ್ಯಾಪ್ತಿಯಲ್ಲಿ ತಾಲ್ಲೂಕು ಕೇಂದ್ರಗಳಾದ ಗುಬ್ಬಿ/ ಚಿಕ್ಕನಾಯಕನಹಳ್ಳಿ/ ತಿಪಟೂರು/ ತುರುವೇಕೆರೆ/ ಸಿರಾ/ ಮಧುಗಿರಿ/ ಪಾವಗಡ/ ಕುಣಿಗಲ್/ ಕೊರಟಗೆರೆ ಮತ್ತು ಹೋಬಳಿ ಕೇಂದ್ರಗಳಲ್ಲಿರುವ ಗುಬ್ಬಿ ತಾಲ್ಲೂಕು ನಿಟ್ಟೂರು, ಕುಣಿಗಲ್ ತಾಲ್ಲೂಕು ಅಮೃತೂರು, ಹುಲಿಯೂರುದುರ್ಗ ಕೆಎಸ್‌ಆರ್‌ಟಿಸಿ ಬಸ್ ನಿಲ್ದಾಣದ ಸುತ್ತಮುತ್ತ 300 ಮೀಟರ್ ವ್ಯಾಪ್ತಿಯಲ್ಲಿ ಖಾಸಗಿ ಬಸ್ ಟೆಂಪೋ ಮತ್ತು ಟೆಂಪೋ ಟ್ರ್ಯಾಕ್ಸ್‌ಗಳು ಹಾಗೂ ಇನ್ನಿತರೆ ಪ್ರಯಾಣಿಕರ ವಾಹನಗಳ ನಿಲುಗಡೆಯನ್ನು ದಿನಾಂಕ:28.08.2009 ರಿಂದ ಜಾರಿಗೆ ಬರುವಂತೆ ಸಂಪೂರ್ಣವಾಗಿ ನಿಷೇಧಿಸಿ ಆದೇಶಿಸಿದೆ.

ಈ ಆದೇಶವನ್ನು ಕೆಎಸ್‌ಆರ್‌ಟಿಸಿ ಬಸ್ ನಿಲ್ದಾಣದ ಸುತ್ತಮುತ್ತಲಿನ ಪ್ರದೇಶದಲ್ಲಿ ನಾಮಫಲಕ ಬರೆಸಿ ಹಾಕಲು ಪೊಲೀಸ್ ಇಲಾಖಾಧಿಕಾರಿಗಳಿಗೆ ಸೂಚಿಸಿದೆ.

**ಡಾ: ಸಿ. ಸೋಮಶೇಖರ್**

ಪಿ.ಆರ್.843 ಜಿಲ್ಲಾಧಿಕಾರಿ

ಹಾಗೂ ಜಿಲ್ಲಾದಂಡಾಧಿಕಾರಿಗಳು, ತುಮಕೂರು ಜಿಲ್ಲೆ.

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ನಮೂನೆ**

1) ಸಚಿವಾಲಯ : ಕರ್ನಾಟಕ ಸರ್ಕಾರ

2) ಇಲಾಖೆ : ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

3) ಸಬ್‌ಯೂನಿಟ್ : ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಶೇಷ ವಿಭಾಗ, ಶಿವಮೊಗ್ಗ.

4) ಸಾರ್ವಜನಿಕ ಪ್ರಾಧಿಕಾರ : ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಸಂಪರ್ಕ ಮತ್ತು ಕಟ್ಟಡ (ದ), ಬೆಂಗಳೂರು.

| ಮೇಲ್ಮನವಿ ಪ್ರಾಧಿಕಾರ (ಹೆಸರು/ವಿಳಾಸ/ಫೋನ್ ಇತ್ಯಾದಿ) | ಸಾರ್ವಜನಿಕ ಮಾಹಿತಿ ಅಧಿಕಾರಿ (ಹೆಸರು/ವಿಳಾಸ/ಫೋನ್ ಇತ್ಯಾದಿ) | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಹೆಸರು/ವಿಳಾಸ/ ಫೋನ್ ಇತ್ಯಾದಿ) |
|---|---|---|
| ಶ್ರೀ. ಬಿ.ಟಿ. ಕಾಂತರಾಜ್ ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಶಿವಮೊಗ್ಗ ವೃತ್ತ, ಶಿವಮೊಗ್ಗ – 577201 | ಶ್ರೀ. ಹೆಚ್.ವಿ. ನಂಜೇಶಯ್ಯ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಶೇಷ ವಿಭಾಗ, ಶಿವಮೊಗ್ಗ – 577201 | ಶ್ರೀ. ಎನ್.ಜೆ. ವಿರೂಪಾಕ್ಷಪ್ಪ ತಾಂತ್ರಿಕ ಸಹಾಯಕರು, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಶೇಷ ವಿಭಾಗ, ಶಿವಮೊಗ್ಗ – 577201 |
| ಫ್ಯಾಕ್ಸ್ – 08182 – 270926 | ಫ್ಯಾಕ್ಸ್ – 08182 – 222942 | ಫ್ಯಾಕ್ಸ್ – 08182 – 222942 |
| ಕಛೇರಿ ಫೋನ್ – 08182–270926 | ಕಛೇರಿ ಫೋನ್–08182–222942 | ಕಛೇರಿ ಫೋನ್–08182–222942 |
| ಇ–ಮೇಲ್: se.smg@kpwd.gov.in | ಇ–ಮೇಲ್: spdivision@gmail.com | ಇ–ಮೇಲ್: spdivision@gmail.com |

**FORMAT**

1) Secretariat : Govt. of Karnataka

2) Department : Public Works Department

3) Sub Unit : The Executive Engineer, P.W.P & I.W.T.D., Special Division, Shimoga.

4) Public Authority : The Chief Engineer, P.W.D Communication and Building (South) K.R.Bangalore.

| Applellate Authority (Name / Address / Phone etc…) | Public Information Officer (Name / Address / Phone etc…) | Assistant Public Information Officer (Name / Address / Phone etc…) |
|---|---|---|
| Sri. B.T. Kantaraj<br>Superintendent Engineer<br>P.W.P & I.W.T.D. Circle,<br>Shimoga - 577201 | Sri. H.V. Nanjeshaiah<br>Executive Engineer<br>P.W.P & I.W.T.D., Special<br>Division, Shimoga - 577201 | Sri. N.J. Verupakshappa<br>Technical Assistant<br>P.W.P & I.W.T.D., Special<br>Division, Shimoga - 577201 |
| Fax - 08182 - 270926 | Fax - 08182 - 222942 | Fax - 08182 - 222942 |
| Phone (Office)<br>08182 - 270926 | Phone (Office)<br>08182 - 222942 | Phone (Office)<br>08182 - 222942 |
| E-Mail: se.smg@kpwd.gov.in | spdivision@gmail.com | spdivision@gmail.com |

**ನಮೂನೆ**

**ಮಾಹಿತಿ ಹಕ್ಕು ಅಧಿನಿಯಮ–2005**

**ಕಾರ್ಯಪಾಲಕ ಅಭಿಯಂತರವರ ಕಛೇರಿ,**

**ಲೋ.ಬಂ. ಮತ್ತು ಒ.ಜ.ಸಾ. ಇಲಾಖೆ,**

**ವಿಶೇಷ ವಿಭಾಗ, ಶಿವಮೊಗ್ಗ**

ಮಾಹಿತಿ ಹಕ್ಕು ಅಧಿನಿಯಮ–2005 ಸೆಕ್ಷನ್ 5(1) (2)ರ ಅಡಿಯಲ್ಲಿ ಈ ಕಛೇರಿಯಿಂದ ನೇಮಿಸಲಾದ ಅಧಿಕಾರಿಗಳು ಸಾರ್ವಜನಿಕ ಸಂಪರ್ಕ ಅಧಿಕಾರಿಗಳಾಗಿರುತ್ತಾರೆ.

ಈ ಕಛೇರಿಯಲ್ಲಿ ಮಾಹಿತಿ ದಾಖಲೆಗಳನ್ನು ನೀಡುವ ಅಧಿಕಾರಿಗಳು : ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) ರ ಪ್ರಕಾರ.

ಮಾಹಿತಿ ಅಧಿಕಾರಿ ಹೆಸರು
ಶ್ರೀ ಹೆಚ್.ವಿ. ನಂಜೇಶಯ್ಯ

ಕಾರ್ಯಪಾಲಕ ಅಭಿಯಂತರು,
ಲೋ.ಬಂ. ಮತ್ತು ಒ.ಜ.ಸಾ. ಇಲಾಖೆ,
ವಿಶೇಷ ವಿಭಾಗ, ಶಿವಮೊಗ್ಗ.
ದೂರವಾಣಿ ಸಂಖ್ಯೆ: 222942

**ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) ರ ಪ್ರಕಾರ**

ಸಹಾಯಕ ಮಾಹಿತಿ ಅಧಿಕಾರಿ ಹೆಸರು
ಶ್ರೀ ಎನ್.ಜೆ. ವಿರೂಪಾಕ್ಷಪ್ಪ

ತಾಂತ್ರಿಕ ಸಹಾಯಕ
ಕಾರ್ಯಪಾಲಕ ಅಭಿಯಂತರವರ ಕಛೇರಿ,
ಲೋ.ಬಂ. ಮತ್ತು ಒ.ಜ.ಸಾ. ಇಲಾಖೆ,
ವಿಶೇಷ ವಿಭಾಗ, ಶಿವಮೊಗ್ಗ.
ದೂರವಾಣಿ ಸಂಖ್ಯೆ: 222942

ಮೇಲಿನ ಅಧಿಕಾರಿಗಳು ಮಾಹಿತಿಯನ್ನು 30 ದಿನಗಳೊಳಗಾಗಿ ನೀಡದಿದ್ದಲ್ಲಿ ಅಥವಾ ಸಹಕರಿಸದಿದ್ದಲ್ಲಿ ದೂರನ್ನು ಮತ್ತು ಮೇಲ್ಮನವಿಯನ್ನು ಸೆಕ್ಷನ್ 19(1)ರ ಪ್ರಕಾರ ಕೆಳಕಂಡ ಅಧಿಕಾರಿಯವರಿಗೆ ನೀಡಬಹುದು.

ಅಧೀಕ್ಷಕ ಅಭಿಯಂತರು,
ಲೋ.ಬಂ. ಮತ್ತು ಒ.ಜ.ಸಾ. ಇಲಾಖೆ,
ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ – 2005 ಸೆಕ್ಷನ್ 5(1) ರ ಪ್ರಕಾರ ಹೆಚ್.ವಿ. ನಂಜೇಶಯ್ಯ, ಕಾರ್ಯಪಾಲಕ ಇಂಜಿನಿಯರ್, ಆದ ನಾನು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್.ಪಿ.ಐ.ಓ.) ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ:27.05.2009 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

ಸಹಿ: ಕಾರ್ಯಪಾಲಕ ಅಭಿಯಂತರು,
ಪದನಾಮ: ಲೋ.ಬಂ. ಮತ್ತು ಒ.ಜ.ಸಾ. ಇಲಾಖೆ,
ವಿಶೇಷ ವಿಭಾಗ, ಶಿವಮೊಗ್ಗ.

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ – 2005 ಸೆಕ್ಷನ್ 5(1) ರ ಪ್ರಕಾರ ಎನ್.ಜೆ. ವಿರೂಪಾಕ್ಷಪ್ಪ, ತಾಂತ್ರಿಕ ಸಹಾಯಕ, ಆದ ನಾನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ.) ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: 27.05.2009 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

ಸಹಿ: ತಾಂತ್ರಿಕ ಸಹಾಯಕ
ಪದನಾಮ: ಕಾರ್ಯಪಾಲಕ ಅಭಿಯಂತರವರ ಕಛೇರಿ,
ಲೋ.ಬಂ. ಮತ್ತು ಒ.ಜ.ಸಾ. ಇಲಾಖೆ,
ವಿಶೇಷ ವಿಭಾಗ, ಶಿವಮೊಗ್ಗ.

**ಕರ್ನಾಟಕ ಸರ್ಕಾರ**
**(ಲೋಕೋಪಯೋಗಿ ಇಲಾಖೆ)**
**ಮಾಹಿತಿ ಹಕ್ಕು ಕೈಪಿಡಿ 2005**
**ಸೆಕ್ಷನ್ 4 (1) (ಬಿ) ಅನ್ವಯ**

ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ,
ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
ವಿಶೇಷ ವಿಭಾಗ, ಶಿವಮೊಗ್ಗ.

**ಕರ್ನಾಟಕ ಸರ್ಕಾರ**
**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,**
**ವಿಶೇಷ ವಿಭಾಗ, ಶಿವಮೊಗ್ಗ**
**ಮಾಹಿತಿ ಹಕ್ಕು ಕೈಪಿಡಿ – 2005 ಸೆಕ್ಷನ್ 4 (1) (ಬಿ) ಅನ್ವಯ**

**I. ಕಛೇರಿಯ ಬಗ್ಗೆ ವಿವರಗಳು, ಕಾರ್ಯಗಳು ಮತ್ತು ಕರ್ತವ್ಯಗಳು**

ಅ) ಕಛೇರಿಯ ಹೆಸರು : ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಶೇಷ ವಿಭಾಗ, ಶಿವಮೊಗ್ಗ.

ಆ) ರಚನೆ




**ನಿಯೋಜನೆಯ ಮೇಲೆ ಇರುವ ನೌಕರರು**

1) ಶ್ರೀ ಜಿ.ಎಸ್. ಜಯದೇವಾರಾಧ್ಯ, ಸಹಾಯಕ ಇಂಜಿನಿಯರ್
(ಲೋಕೋಪಯೋಗಿ ಇಲಾಖೆ ವಿಶೇಷ ಉಪವಿಭಾಗ, ಶಿವಮೊಗ್ಗ)
2) ಶ್ರೀ ಸಿ.ಎಸ್. ಸತೀಶ್, ದ್ವಿತೀಯ ದರ್ಜೆ ಸಹಾಯಕರು
(ಅಧೀಕ್ಷಕ ಅಭಿಯಂತರವರ ಕಛೇರಿ, ಶಿವಮೊಗ್ಗ ವೃತ್ತ, ಶಿವಮೊಗ್ಗ)

3) ಶ್ರೀ ಎ.ಎಂ. ಲೋಕೇಶ್‌ರಾವ್, ಕ್ಲೀನರ್
(ನಂ.1 ಲೋ.ಇ. ಉಪವಿಭಾಗ, ಶಿವಮೊಗ್ಗ)

**ಇ) ಕಾರ್ಯಗಳು ಮತ್ತು ಕರ್ತವ್ಯಗಳು:**

ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ರಸ್ತೆಗಳು, ಕಟ್ಟಡಗಳು, ಸೇತುವೆಗಳು ಹಾಗೂ ಸಾರ್ವಜನಿಕ ಆಸ್ತಿ–ಪಾಸ್ತಿಗಳಿಗೆ ಸಂಬಂಧಿಸಿದ ಆಡಳಿತಾತ್ಮಕ ಆರ್ಥಿಕ ಹಾಗೂ ಸೇವೆಗಳಿಗೆ ಸಂಬಂಧಿಸಿದ ಕೆಲಸ–ಕಾರ್ಯಗಳನ್ನು ನಿರ್ವಹಿಸಲಾಗುತ್ತದೆ, ಹಾಗೂ ಶಿವಮೊಗ್ಗ ಜಿಲ್ಲೆಗೆ ಸಂಬಂಧಿಸಿದಂತೆ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಉಪವಿಭಾಗ, ಶಿವಮೊಗ್ಗ, ತೀರ್ಥಹಳ್ಳಿ, ಭದ್ರಾವತಿ ಹಾಗೂ ವಿಶೇಷ ಉಪವಿಭಾಗ, ಶಿವಮೊಗ್ಗಗಳನ್ನು ಒಳಗೊಂಡಿರುತ್ತದೆ.

**II. ಅಧಿಕಾರಿಗಳು ಮತ್ತು ಸಿಬ್ಬಂದಿ : ಅಧಿಕಾರ ಹಾಗೂ ಕರ್ತವ್ಯಗಳು:**

1) **ಕಾರ್ಯಪಾಲಕ ಇಂಜಿನಿಯರ್:** ಶಿವಮೊಗ್ಗ, ತೀರ್ಥಹಳ್ಳಿ, ಭದ್ರಾವತಿ ಉಪವಿಭಾಗಗಳು ಹಾಗೂ ವಿಶೇಷ ಉಪವಿಭಾಗ, ಶಿವಮೊಗ್ಗ ಉಪವಿಭಾಗಗಳ ವ್ಯಾಪ್ತಿಗೆ ಒಳಪಟ್ಟಂತೆ ಲೋಕೋಪಯೋಗಿ ಇಲಾಖೆಯ ಅಧಿಕೃತ ಮುಖ್ಯಸ್ಥರಾಗಿದ್ದು, ಸರ್ಕಾರಿ ನಿಯಮಗಳ ಚೌಕಟ್ಟಿನಲ್ಲಿ ಹಾಗೂ ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳಿಗೆ/ಒಳಪಟ್ಟು/ಪ್ರಕರಣಗಳ ವಿಲೇವಾರಿ ಮತ್ತು ಎಲ್ಲಾ ವ್ಯವಹಾರದ ಜವಬ್ದಾರಿ ಹೊಂದಿರುತ್ತಾರೆ ಹಾಗೂ ಅಧೀನ ಅಧಿಕಾರಿ/ಸಿಬ್ಬಂಧಿಯ ಮೇಲ್ವಿಚಾರಣೆ ಮತ್ತು ನಿಯಂತ್ರಣ ಹೊಂದಿರುತ್ತಾರೆ.
2) **ತಾಂತ್ರಿಕ ಸಹಾಯಕರು:–** ತಾಂತ್ರಿಕ ಶಾಖೆಯ ಸಂಪೂರ್ಣ ಉಸ್ತುವಾರಿ ಹಾಗೂ ವಿಷಯ ನಿರ್ವಾಹಕರು ಮಂಡಿಸಲಾದ ಪ್ರತಿಯೊಂದು ತಾಂತ್ರಿಕ ವಿಚಾರಗಳ ಪತ್ರ ಹಾಗೂ ಕಡತಗಳಿಗೆ ಸೂಕ್ತ ಮಾರ್ಗದರ್ಶನ ನೀಡಿ ಮುಂದಿನ ಆದೇಶಕ್ಕಾಗಿ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಇವರಿಂದ ಮಂಡಿಸಲಾಗುತ್ತಿದೆ.
3) **ಸಹಾಯಕ ಇಂಜಿನಿಯರ್ : 1**
   1) ನಂ.1 ಉಪವಿಭಾಗ, ಶಿವಮೊಗ್ಗ/ ವಿಶೇಷ ವಿಭಾಗ, ಶಿವಮೊಗ್ಗ ವ್ಯಾಪ್ತಿಯ ಅಂದಾಜು ಪಟ್ಟಿಗಳ ಪರಿಶೀಲನೆ, ಮಂಜೂರಾತಿ ಹಾಗೂ ನಬಾರ್ಡ್ ಕಾಮಗಾರಿಗಳು ಇತ್ಯಾದಿ.
   2) ನಬಾರ್ಡ್ ಕಾಮಗಾರಿಗಳ ಪ್ರಗತಿ ವರದಿ / ಪಿಸಿಆರ್ ಸಲ್ಲಿಕೆಯ ಪ್ರಗತಿ ವರದಿ ತಯಾರಿಸಿ ಸಲ್ಲಿಸುವುದು.
   3) ಜಿಲ್ಲಾ ಮುಖ್ಯ ರಸ್ತೆಗಳ ವಿವರ ನಿರ್ವಹಣೆ, ಪ್ರಗತಿ ವರದಿ ಹಾಗೂ ಸಂಬಂಧಿಸಿದ ಪತ್ರ ವ್ಯವಹಾರ.
   4) ನೆರೆಹಾವಳಿ ಕಾಮಗಾರಿಗಳ ಪ್ರಗತಿ ವರದಿ.
   5) ಉಪವಿಭಾಗಗಳ ಎಂಪಿಕ್ ಪ್ರಗತಿ ವರದಿ ತಯಾರಿಸುವುದು, ಹಾಗೂ ವಿಭಾಗ ಮಟ್ಟದ ವಿವಿಧ ಲೆಕ್ಕಶೀರ್ಷಿಕೆಗಳ ಅನುಗುಣವಾಗಿ ಮಾಸಿಕ ಪ್ರಗತಿ ವರದಿಯನ್ನು ಪೂರ್ಣಗೊಳಿಸುವುದು. ಭರವಸೆ ಸಮಿತಿಯ ಪಾಲನಾವರದಿ ತಯಾರಿಕೆ ಕ್ರೂಢೀಕರಿಸುವುದು.
   6) ಎಂಎಡಿಬಿ ಸಭೆಯ ಪತ್ರ ವ್ಯವಹಾರ ಮತ್ತು ಪ್ರಗತಿ ವರದಿ.
   7) ಇಐಆರ್‌ಎಲ್ / ವರ್ಕ್‌ಸ್ಲಿಪ್ ರಿಜಿಸ್ಟರ್ ನಿರ್ವಹಣೆ
   8) ಡಾ: ನಂಜುಂಡಪ್ಪ ಆಯೋಗದ ವರದಿಗೆ ಸಂಬಂಧಿಸಿದ ಕಾರ್ಯಕ್ರಮ ಪಟ್ಟಿ ತಯಾರಿಕೆ, ಪ್ರಗತಿ ವರದಿ ಪತ್ರ ವ್ಯವಹಾರ.
   9) ತಾಂತ್ರಿಕ ಶಾಖೆಗೆ ಸಂಬಂಧಿಸಿದ ಸರ್ಕಾರಿ ಆದೇಶಗಳು ಹಾಗೂ ಮೇಲಾಧಿಕಾರಿಗಳಿಂದ ಸ್ವೀಕೃತವಾದ ಸುತ್ತೋಲೆಗಳು.
   10) ಟೆಂಡರ್ ಅಗ್ರಿಮೆಂಟ್ ರಿಜಿಸ್ಟರ್, ಟೆಂಡರ್ ಪ್ರಕಟಣೆ ರಿಜಿಸ್ಟರ್, ಹಾಗೂ ಇನ್ನಿತರ ಅಗತ್ಯ ರಿಜಿಸ್ಟರ್ ನಿರ್ವಹಣೆ.
   11) ಎಲ್.ಎ.ಕ್ಯೂ./ಎಲ್.ಸಿ.ಕ್ಯೂ. ಕಡತ ನಿರ್ವಹಣೆ, ಎಲ್.ಎ.ಕ್ಯೂ. / ಎಲ್.ಸಿ.ಕ್ಯೂ. ಸಂಬಂಧಪಟ್ಟ ಮೂಲ ಕಡತ ನಿರ್ವಹಣೆ.
4) **ಸಹಾಯಕ ಇಂಜಿನಿಯರ್ : 2**
   1) ಭದ್ರಾವತಿ ಉಪ ವಿಭಾಗ, ವ್ಯಾಪ್ತಿಯ ಅಂದಾಜು ಪಟ್ಟಿಗಳ ಪರಿಶೀಲನೆ, ಮಂಜೂರಾತಿ ಹಾಗೂ ನಬಾರ್ಡ್ ಕಾಮಗಾರಿಗಳು ಇತ್ಯಾದಿ.
   2) ಉಪವಿಭಾಗದ ಎಂಪಿಕ್ ಪ್ರಗತಿ ವರದಿ ತಯಾರಿಸುವುದು ಹಾಗೂ ಲೆಕ್ಕಶೀರ್ಷಿಕೆಗಳ ಅನುಗುಣವಾಗಿ ಮಾಸಿಕ ಪ್ರಗತಿ ವರದಿಯನ್ನು ಪೂರ್ಣಗೊಳಿಸಿ ಸಲ್ಲಿಸುವುದು.
   3) ರಾಜ್ಯಹೆದ್ದಾರಿ ಮೂರು ವರ್ಷ ನಿರ್ವಹಣೆ ಕಾಮಗಾರಿ, ರಾಜ್ಯಹೆದ್ದಾರಿಗೆ ಸಂಬಂಧಿಸಿದಂತೆ ಕೆಆರ್‌ಡಿಸಿಎಲ್ ಕೆಶಿಪ್ ಇನ್ನಿತರೆ ಯೋಜನೆಯಡಿ ಸಂಬಂಧಿಸಿದಂತೆ ಅಂದಾಜುಪಟ್ಟಿ ಪರಿಶೀಲನೆ ಸಲ್ಲಿಕೆ, ಟೆಂಡರ್ ಹಾಗೂ ಪತ್ರ ವ್ಯವಹಾರ.

4) ಸಿಆರ್ಎಫ್ ಕಾಮಗಾರಿಗೆ ಸಂಬಂಧಿಸಿದಂತೆ ಅಂದಾಜುಪಟ್ಟಿ ಪರಿಶೀಲನೆ ಟೆಂಡರ್ ಕರೆಯುವುದು ಪತ್ರ ವ್ಯವಹಾರ ಪ್ರಗತಿ ವರದಿ ಇತ್ಯಾದಿ.
5) ಗುಣ–ನಿಯಂತ್ರಣಕ್ಕೆ ಸಂಬಂಧಿಸಿದ ಸಾಮಾನ್ಯ ಪತ್ರ ವ್ಯವಹಾರ, ಸುತ್ತೋಲೆಗಳಲ್ಲಿ ವಿನ್ಯಾಸಕ್ಕೆ ಸಂಬಂಧಪಟ್ಟ ಸಾಮಾನ್ಯ ಪತ್ರ ವ್ಯವಹಾರ, ಇ–ಪ್ರಕ್ಯೂರ್‌ಮೆಂಟ್/ಇ–ಗೌರ್ನನೆನ್ಸ್ ತಾಂತ್ರಿಕ ಶಾಖೆಗೆ ಸಂಬಂಧಪಟ್ಟ ಪತ್ರ ವ್ಯವಹಾರ.
6) ಟೆಂಡರ್ ಅಗ್ರಿಮೆಂಟ್ ರಿಜಿಸ್ಟರ್, ಟೆಂಡರ್ ಪ್ರಕಟಣೆ ರಿಜಿಸ್ಟರ್, ಹಾಗೂ ಇನ್ನಿತರ ಅಗತ್ಯ ರಿಜಿಸ್ಟರ್ ನಿರ್ವಹಣೆ.
7) ಎಸ್.ಸಿ.ಪಿ. / ಟಿ.ಎಸ್.ಪಿ. ಯೋಜನೆಯಡಿ ಕಾಮಗಾರಿಗಳ ಕಾರ್ಯಕ್ರಮ ಪಟ್ಟಿ ತಯಾರಿಕೆ ಪ್ರಗತಿ ವರದಿ ಸಾಮಾನ್ಯ ಪತ್ರ ವ್ಯವಹಾರ.

5) ಕಿರಿಯ ಇಂಜಿನಿಯರ್ : 1 – ಖಾಲಿ –

6) ಅಧೀಕ್ಷಕರು : 1 – ಖಾಲಿ –

7) ಪ್ರಥಮ ದರ್ಜೆ ಸಹಾಯಕ : 1 ಸಿಬ್ಬಂದಿ (1)

ಅಧಿಕಾರಿ ಮತ್ತು ನೌಕರರ ಸೇವಾ ವಿವರಗಳು, ಸೇವಾಪುಸ್ತಕದ ನಿರ್ವಹಣೆ, ಕಛೇರಿಯ ಆಯವ್ಯಯ, ಗುತ್ತಿಗೆದಾರರ ನೋಂದಾಣಿ, ಸಿಬ್ಬಂಧಿ ವೆಚ್ಚದ ವಿವರ, ಸಿಬ್ಬಂಧಿ ವೇತನ ಬಿಲ್ ಕಾಮಗಾರಿ, ಮಾಹಿತಿ ಹಕ್ಕಿಗೆ ಸಂಬಂಧಿಸಿದ ಎಲ್ಲಾ ಕೆಲಸಗಳು. ಕಛೇರಿಯ ಸಿಬ್ಬಂಧಿ ಶಾಖೆಯ ಕೆಲಸದ ಜೊತೆಗೆ ಲೆಕ್ಕ ಶಾಖೆಯ ಶಿವಮೊಗ್ಗ ನಂ.1 ಉಪ–ವಿಭಾಗದ ಕಾಮಗಾರಿ ಬಿಲ್‌ಗಳ ಆಡಿಟ್ ಹಾಗೂ ಅದಕ್ಕೆ ಸಂಬಂಧಿಸಿದ ಎಲ್ಲಾ ಕೆಲಸಗಳು ಮತ್ತು ಪ್ರಗತಿ ವರದಿಯ ತಯಾರಿ ಮತ್ತು ಲೆಕ್ಕ ಅಧೀಕ್ಷಕರು ಮತ್ತು ಕಾರ್ಯಪಾಲಕ ಇಂಜಿನಿಯರ್‌ರವರು ಸೂಚಿಸಿದ ಇತರೆ ಕೆಲಸಗಳು.

8) ದ್ವಿತೀಯಾ ದರ್ಜೆ ಸಹಾಯಕ : 1 ಸಿಬ್ಬಂದಿ (2)

ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವಿವರಗಳ ನಿರ್ವಹಣೆ, ಕಛೇರಿಯ ಪತ್ರಗಳ ರವಾನೆ, ವಸತಿ ಗೃಹಗಳ ಹಂಚಿಕೆ, ಪ್ರವಾಸಿ ಮಂದಿರದ ನಿರ್ವಹಣೆ, ಹಾಗೂ ಕಾರ್ಯಪಾಲಕ ಇಂಜಿನಿಯರ್‌ರವರು ಸೂಚಿಸಿದ ಇತರೆ ಕೆಲಸಗಳು.

9) ದ್ವಿತೀಯಾ ದರ್ಜೆ ಸಹಾಯಕ : 2 – ಖಾಲಿ –

10) ಕಂಪ್ಯೂಟರ್ ಅನಾಲಿಸ್ಟ್ : 1 : – ಖಾಲಿ –

11) ವಾಹನ ಚಾಲಕ :– 2 : – ಖಾಲಿ –

12) ಡಿ ದರ್ಜೆ ನೌಕರರು :– 2 : – ಖಾಲಿ –

13) ಕಾವಲುಗಾರ :– 1 : – ಖಾಲಿ –

14) **ಲೆಕ್ಕ ಅಧೀಕ್ಷಕರು:** ಕಛೇರಿ ಲೆಕ್ಕ ಪತ್ರ ಶಾಖೆಯ ಸಂಪೂರ್ಣ ಮೇಲು ಉಸ್ತುವಾರಿ ಮಾಡುವುದು. ವಿಭಾಗ ಹಾಗೂ ಉಪವಿಭಾಗ ಕಛೇರಿಯ ಲೆಕ್ಕ ಪತ್ರಗಳು ಹಾಗೂ ಉಪವಿಭಾಗ ಕಛೇರಿಯ ಕಾಮಗಾರಿ ಬಿಲ್ಲುಗಳ ಪಾಸು ಮಾಡುವ ಬಗ್ಗೆ ಸಂಪೂರ್ಣ ಉಸ್ತುವಾರಿ ಹಾಗೂ ಮಾಸಿಕ ಸಭೆಗಳಿಗೆ ಹಾಜರಾಗುವುದು.

15) ಪ್ರಥಮ ದರ್ಜೆ ಲೆಕ್ಕ ಸಹಾಯಕ : 1

ಕಛೇರಿಯ ನಗದು ಶಾಖೆಯ ಪೂರ್ಣ ಪ್ರಭಾರ, ತೀರ್ಥಹಳ್ಳಿ, ಭದ್ರಾವತಿ, ಮತ್ತು ವಿಶೇಷ ಉಪ–ವಿಭಾಗ ಶಿವಮೊಗ್ಗ, ಉಪ–ವಿಭಾಗಗಳ ಬಿಲ್ ಆಡಿಟ್ ಹಾಗೂ ಅದಕ್ಕೆ ಸಂಬಂಧಿಸಿದ ಎಲ್ಲಾ ಕೆಲಸ ಹಾಗೂ ಬಿ.ಆರ್. ರಿಜಿಸ್ಟರ್‌ನ ಪಾಲನೆ ಮತ್ತು ನಿರ್ವಹಣೆ ಹಾಗೂ ಪೆಂಡಿಂಗ್ ಬಿಲ್‌ಗಳ ನಿರ್ವಹಣೆ, ಅನುದಾನ ಮತ್ತು ವೆಚ್ಚ ನಿರ್ವಹಣೆ ಹಾಗೂ ಲೆಕ್ಕ ಅಧೀಕ್ಷಕರು ಮತ್ತು ಕಾರ್ಯಪಾಲಕ ಇಂಜಿನಿಯರ್‌ರವರು ಸೂಚಿಸಿದ ಇತರೆ ಕೆಲಸಗಳು.

16) ದ್ವಿತೀಯಾ ದರ್ಜೆ ಲೆಕ್ಕ ಸಹಾಯಕ : 2 : – ಖಾಲಿ –

**ನಿಯೋಜನೆಯ ಮೇಲೆ ಕೆಲಸ ಮಾಡುತ್ತಿರುವ ಸಿಬ್ಬಂದಿಗಳು**

**1) ಸಹಾಯಕ ಇಂಜಿನಿಯರ್ : 3**

1) ತೀರ್ಥಹಳ್ಳಿ ಉಪವಿಭಾಗದ ಅಂದಾಜುಪಟ್ಟಿಗಳ ಪರಿಶೀಲನೆ, ಮಂಜೂರಾತಿ, ಟೆಂಡರ್ ಕರೆಯುವುದು ಹಾಗೂ ನಬಾರ್ಡ್ ಕಾಮಗಾರಿಗಳು.
2) ಉಪವಿಭಾಗದ ಎಂಪಿಕ್ ಪ್ರಗತಿ ವರದಿ ತಯಾರಿಕೆ ಹಾಗೂ ಲೆಕ್ಕಶೀರ್ಷಿಕೆಗಳ ಅನುಗುಣವಾಗಿ ಮಾಸಿಕ ಪ್ರಗತಿ ವರದಿಯನ್ನು ಪೂರ್ಣಗೊಳಿಸಿ ಸಲ್ಲಿಸುವುದು.
3) ಎಂಪಿ/ಎಂಎಲ್ಎ ಹಾಗೂ ಇತರೆ ಠೇವಣಿ ಕೊಡುಗೆ ಕಾಮಗಾರಿಗಳ ಪ್ರಗತಿ ವರದಿ.

4) ತುಂಡುಗುತ್ತಿಗೆ ಅಗ್ರಿಮೆಂಟ್ ರಿಜಿಸ್ಟರ್

5) ಅಂದಾಜುಪಟ್ಟಿ ಮಂಜೂರಾತಿ ರಿಜಿಸ್ಟರ್ / ಮೇಲಾಧಿಕಾರಿಗಳಿಗೆ ಸಲ್ಲಿಸಿದ ಅಂದಾಜುಪಟ್ಟಿ ರಿಜಿಸ್ಟರ್.

6) ಸುವರ್ಣ ರಸ್ತೆ ಅಭಿವೃದ್ಧಿ ಯೋಜನೆಯಡಿ ಕಾರ್ಯಕ್ರಮ ಪಟ್ಟಿ ತಯಾರಿಕೆ, ಪ್ರಗತಿ ವರದಿ ಸಾಮಾನ್ಯ ಪತ್ರ ವ್ಯವಹಾರ.

**2) ದ್ವಿತೀಯಾ ದರ್ಜೆ ಸಹಾಯಕ : 3 (ಸಿಬ್ಬಂದಿ)**

ಕಛೇರಿ ಪತ್ರಗಳ ಸ್ವೀಕೃತಿ ಮತ್ತು ವಿಭಾಗ ಕಛೇರಿಯ ಪ್ರಯಾಣ ಭತ್ಯೆ ಬಿಲ್ಲುಗಳ ಪಾವತಿ ಮತ್ತು ನಿರ್ವಹಣೆ, ಕಛೇರಿಯ ಉಗ್ರಾಣದ ಕೆಲಸ. ಲೆಕ್ಕ ಅಧೀಕ್ಷಕರು ಮತ್ತು ಕಾರ್ಯಪಾಲಕ ಇಂಜಿನಿಯರ್‌ರವರು ಸೂಚಿಸಿದ ಇತರೆ ಕೆಲಸಗಳು.

**3) ಕ್ಲೀನರ್:**

ಕಛೇರಿಯ ಎಲ್ಲಾ ಶಾಖೆಯೊಳಗೆ ಮತ್ತು ಹೊರಗೆ ಸಂಬಂಧಿಸಿದವರಿಗೆ, ಕಡತ ಟಪಾಲನ್ನು ತಲುಪಿಸುವುದು ಹಾಗೂ ಕಛೇರಿಯನ್ನು ಸ್ವಚ್ಛವಾಗಿಡುವುದು.

**III. ಮೇಲ್ವಿಚಾರಣೆ ಮತ್ತು ಜವಬ್ದಾರಿಗಳನ್ನು ಒಳಗೊಂಡಂತೆ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕ್ರಮಗಳು:**

1) **ಕಾರ್ಯಪಾಲಕ ಇಂಜಿನಿಯರ್:** ಸರ್ಕಾರದಿಂದ ಲಭ್ಯವಾದ ಅಧಿಕಾರ ಪ್ರತ್ಯಾ ಯೋಜನೆಯ ಅನುಸಾರ ತಾಂತ್ರಿಕ ಮತ್ತು ಆಡಳಿತಾತ್ಮಕ ವಿಷಯಗಳ ಬಗ್ಗೆ ನಿರ್ಣಯ ಕೈಗೊಳ್ಳುವುದು, ವಿಭಾಗ ವ್ಯಾಪ್ತಿಯ ಕಾಮಗಾರಿಯ ಕಾರ್ಯನೀತಿಯ ಬಗ್ಗೆ ಪ್ರಸ್ತಾವನೆಗಳನ್ನು ವೃತ್ತ ಹಾಗೂ ಕೇಂದ್ರ ಕಛೇರಿಗೆ ಸಲ್ಲಿಸುವುದು.
2) **ತಾಂತ್ರಿಕ ಸಹಾಯಕರು:** ತಾಂತ್ರಿಕ ವಿಷಯಗಳ ಬಗ್ಗೆ ಹಾಗೂ ಇಲಾಖಾ ಕಾಮಗಾರಿಗಳ ಬಗ್ಗೆ ನಕ್ಷೆ ಅಂದಾಜು ಪಟ್ಟಿಗಳನ್ನು ಪರಿಶೀಲಿಸುವುದು, ಅಧಿಕಾರ ಯೋಜನೆಯ ಪ್ರಕಾರ ಕಾರ್ಯಪಾಲಕ ಇಂಜಿನಿಯರ್‌ರವರ ಅನುಮೋದನೆಗೆ ಮಂಡಿಸುವುದು. ಕಾರ್ಯಪಾಲಕ ಇಂಜಿನಿಯರ್‌ರವರಿಗೆ ತಾಂತ್ರಿಕ ವಿಷಯಗಳ ಬಗ್ಗೆ ಮಾಹಿತಿ ಒದಗಿಸುವುದು.
3) **ಸಹಾಯಕ ಇಂಜಿನಿಯರ್: ಕಿರಿಯ ಇಂಜಿನಿಯರ್:** ವಿಭಾಗ ವ್ಯಾಪ್ತಿಯ ಟೆಂಡರ್, ನಕ್ಷೆ, ಅಂದಾಜುಪಟ್ಟಿಗಳ ಪರಿಶೀಲನೆ, ಕಡತ ಮಂಡಿಸುವುದು, ಅಧಿಕಾರ ಪ್ರತ್ಯಾಯೋಜನೆಗಳ ಬಗ್ಗೆ ಮಾಹಿತಿ ಒದಗಿಸುವುದು.
4) **ಅಧೀಕ್ಷಕರು:** ಕಛೇರಿಯ ಎಲ್ಲಾ ಸಿಬ್ಬಂದಿಗಳ ನಿರ್ವಹಣೆ, ಆಡಳಿತ ಶಾಖೆಯ ಮೇಲ್ವಿಚಾರಣೆ, ಕಡತಗಳ ವಿಲೇವಾರಿಗೆ ಕ್ರಮ ಕೈಗೊಳ್ಳುವುದು.
5) **ಪ್ರ.ದ.ಸ/ದ್ವಿ.ದ.ಸ :** ಪ್ರಸ್ತಾವನೆಗಳು ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ ಅಭಿಪ್ರಾಯ, ಶಿಫಾರಸ್ಸಿನೊಂದಿಗೆ ಆದೇಶಕ್ಕಾಗಿ ಮೇಲಾಧಿಕಾರಿಗಳಿಗೆ ಮಂಡಿಸುವುದು.
6) **ಕಂಪ್ಯೂಟರ್ ಅನಾಲಿಸ್ಟ್ :** ಕಛೇರಿಗೆ ಸಂಬಂಧಪಟ್ಟ ಪತ್ರಗಳ ಬೆರಳಚ್ಚು ಮಾಡುವುದು.
7) **ಚಾಲಕರು :** ಕಾರ್ಯಪಾಲಕ ಇಂಜಿನಿಯರ್‌ರವರ ವಾಹನ ಚಾಲನೆ ಮಾಡುವುದು ಮತ್ತು ವಾಹನಗಳ ಸೂಕ್ತ ನಿರ್ವಹಣೆ ಮಾಡುವುದು.
8) **'ಡಿ' ದರ್ಜೆ ನೌಕರರು:** ಕಛೇರಿಯ ಎಲ್ಲಾ ಶಾಖೆಯೊಳಗೆ ಮತ್ತು ಹೊರಗೆ ಸಂಬಂಧಿಸಿದವರಿಗೆ, ಕಡತ ಟಪಾಲನ್ನು ತಲುಪಿಸುವುದು ಹಾಗೂ ಕಛೇರಿಯನ್ನು ಸ್ವಚ್ಛವಾಗಿಡುವುದು.
9) **ಕಾವಲುಗಾರ:** ಕಛೇರಿಯ ಒಳಗೆ ಇರುವ ಅವಶ್ಯ ದಾಖಲೆಗಳ ರಕ್ಷಣೆಗಾಗಿ ಕಛೇರಿಯನ್ನು ಕಾವಲು ಕಾಯುವುದು.
10) **ಲೆಕ್ಕ ಅಧೀಕ್ಷಕರು:** ಲೆಕ್ಕ ಪತ್ರ ಶಾಖೆಯ ಮೇಲ್ವಿಚಾರಣೆ ಕಡತಗಳ ವಿಲೇವಾರಿಗೆ ಕ್ರಮಕೈಗೊಳ್ಳುವುದು.
11) **ಪ್ರ.ದ.ಲೆ.ಸ/ದ್ವಿ.ದ.ಲೆ.ಸ:** ಬಿಲ್ಲುಗಳು ಹಾಗೂ ಪ್ರಸ್ತಾವನೆಗಳನ್ನು ನಿಯಮಾನುಸಾರ ಪರಿಶೀಲಿಸಿ ಅಭಿಪ್ರಾಯ ಶಿಫಾರಸ್ಸಿನೊಂದಿಗೆ ಆದೇಶಕ್ಕಾಗಿ ಮೇಲಾಧಿಕಾರಿಗಳಿಗೆ ಮಂಡಿಸುವುದು.

**IV. ಕಾರ್ಯನಿರ್ವಹಿಸುವಲ್ಲಿ ಅನುಸರಿಸುವ ಮಾನದಂಡಗಳು :** ಕೆ.ಪಿ.ಡಬ್ಲ್ಯೂ 'ಡಿ' ಕೋಡ್ ಮತ್ತು ಕೆ.ಪಿ.ಡಬ್ಲ್ಯೂ 'ಎ' ಕೋಡ್ ಹಾಗೂ ಕರ್ನಾಟಕ ಟ್ರಾನ್ಸ್‌ಫರೆನ್ಸಿ ಇನ್ ಪಬ್ಲಿಕ್ ಪ್ರಕ್ಯೂರ್‌ಮೆಂಟ್ ಆಕ್ಟ್ 2002 ರಲ್ಲಿ ನಿಗದಿಪಡಿಸಿರುವ ಮಾನದಂಡಗಳನ್ನು ಅನುಸರಿಸುವುದು.

**V. ಕಾರ್ಯಗಳನ್ನು ನಿರ್ವಹಿಸುವಲ್ಲಿ ಇಲಾಖೆಯ ಸಿಬ್ಬಂದಿ ಹೊಂದಿರುವ ಅಥವಾ ಉಪಯೋಗಿಸುವ ನಿಯಮಗಳು:– ನಿಬಂಧನೆಗಳು, ಸೂಚನೆಗಳು, ಕೈಪಿಡಿ ಮತ್ತು ದಾಖಲೆಗಳು.**

ಅ) ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958

ಆ) ಕರ್ನಾಟಕ ಆರ್ಥಿಕ ಸಂಹಿತೆ ನಿಯಮ

ಇ) ಖಜಾನೆ ಸಂಹಿತೆ.

ಈ) ಸಾದಿಲ್ವಾರು ವೆಚ್ಚದ ಕೈಪಿಡಿ

ಉ) ಕೆ.ಪಿ.ಡಬ್ಲ್ಯೂ.ಡಿ. 'ಎ' ಕೋಡ್

ಊ) ಕೆ.ಪಿ.ಡಬ್ಲ್ಯೂ.ಡಿ. 'ಡಿ' ಕೋಡ್

ಋ) ಕರ್ನಾಟಕ ನಾಗರೀಕ ಸೇವೆಗಳು (ನಡತೆ) ನಿಯಮಗಳು 1966

ಎ) ಕರ್ನಾಟಕ ನಾಗರೀಕ ಸೇವೆಗಳು (ಸಿ.ಸಿ.ಎ.) ನಿಯಮಗಳು 1957

ಏ) ಕರ್ನಾಟಕ ಸರ್ಕಾರ ಸರ್ಕಾರಿ ವಸತಿಗೃಹಗಳ ಹಂಚಿಕೆ ನಿಯಮಗಳು 1986

ಐ) ಕಾರ್ಯಾಲಯದ ಕೈಪಿಡಿ

ಒ) ಉಗ್ರಾಣದ ಕೈಪಿಡಿ

ಓ) ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಯ ನಿಯಮಗಳು (ಆದೇಶ ದಿನಾಂಕ:02.02.2001)

ಔ) ಲೋಇ ಮತ್ತು ನೀರಾವರಿ ಇಲಾಖಾ ಅಧಿಕಾರ ಪ್ರತ್ಯಾಯೋಜನೆಯ ನಿಯಮಗಳು (ಆದೇಶ ದಿನಾಂಕ:15.12.1994)

ಅಂ) ಸೇವಾ ವಿಷಯಗಳು ಇತ್ಯಾದಿ ವಿಚಾರದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ : ಆರ್ಥಿಕ ಇಲಾಖೆ : ಲೋಇ ಹೊರಡಿಸಿದ ಆದೇಶದ ಸುತ್ತೋಲೆ, ಸೂಚನೆಗಳು

**VI. ಇಲಾಖೆಯು ಹೊಂದಿರುವ ದಸ್ತಾವೇಜುಗಳ ಪಟ್ಟಿ**

1) ವಿಷಯ ವಹಿ, ಸಿಬ್ಬಂದಿ ವಹಿ
2) ವಿಧಾನಸಭೆ : ವಿಧಾನಪರಿಷತ್ ಪ್ರಶ್ನೆಗಳಿಗೆ ಸಂಬಂಧಿಸಿದ ರಿಜಿಸ್ಟರ್
3) ನ್ಯಾಯಾಲಯದ : ಕೆಎಟಿ : ಕಾರ್ಮಿಕ ಪ್ರಕ್ರರಣಗಳ ರಿಜಿಸ್ಟರ್
4) ಟೆಂಡರ್ ಅನುಮೋದನೆ ರಿಜಿಸ್ಟರ್
5) ಆಯವ್ಯಯ ಅಂದಾಜುಪಟ್ಟಿ ಅನುಮೋದನೆ ರಿಜಿಸ್ಟರ್
6) ಖರೀದಿ ಸಮಿತಿ ಅನುಮೋದನೆ ರಿಜಿಸ್ಟರ್
7) ಇಲಾಖಾ ರಸ್ತೆ, ಕಟ್ಟಡ, ಸೇತುವೆಗಳ ಅಂಕಿ–ಅಂಶದ ರಿಜಿಸ್ಟರ್
8) ಇತರೆ ರಿಜಿಸ್ಟರ್‌ಗಳು.

**VII. ನೀತಿ–ನಿಯಮಗಳನ್ನು ರೂಪಿಸಲು ಸಾರ್ವಜನಿಕರೊಂದಿಗೆ ಸಮಾಲೋಚಿಸಲು ಅಸ್ತಿತ್ವದಲ್ಲಿರುವ ಕಾರ್ಯ ವಿಧಾನದ ವಿವರಗಳು:** ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯನ್ನಾಗಿ ವಿಭಾಗ ಕಛೇರಿಯ ತಾಂತ್ರಿಕ ಸಹಾಯಕರನ್ನು ನೇಮಕ ಮಾಡಲಾಗಿದೆ, ಇವರು ಸಂಬಂಧಿಸಿದ ಸಾರ್ವಜನಿಕ ವಲಯಗಳಿಂದ ದೂರು ಆಕ್ಷೇಪಣೆಗಳನ್ನು ಆಹ್ವಾನಿಸಿ ಪರಿಶೀಲಿಸಿ ಅಂತಿಮ ಆದೇಶವನ್ನು ಹೊರಡಿಸಲು ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಸಹಕಾರ ನೀಡುತ್ತಾರೆ.

**VIII.** ಸರ್ಕಾರದ ಒಂದು ಭಾಗವಾಗಿ ಅಥವಾ ಸಲಹೆಗಳನ್ನು ಪಡೆಯಲು ರಚಿತವಾದ 2 ಮತ್ತು ಹೆಚ್ಚು ವ್ಯಾಪ್ತಿಗಳನ್ನೊಳಗೊಂಡ ಮಂಡಳಿ, ಪರಿಷತ್ತು, ಸಮಿತಿ ಮತ್ತು ಇತರೆ ಅಂಗಗಳು ಮತ್ತು ಅವುಗಳ ಸಭೆಗಳು ಸಾರ್ವಜನಿಕರ ಪ್ರವೇಶಕ್ಕೆ ಮುಕ್ತವಾಗಿದೆಯೇ ಅಥವಾ ಈ ಸಭೆಗಳ ನಡವಳಿಗಳು ಸಾರ್ವಜನಿಕರಿಗೆ ದೊರಕುತ್ತಿದೆಯೆ ಎಂಬ ಬಗ್ಗೆ ವಿವರಣೆ.

**ಯಾವುದು ಇರುವುದಿಲ್ಲ.**

**IX. ಲೋಕೋಪಯೋಗಿ ಇಲಾಖೆಯ ವಿಶೇಷ ವಿಭಾಗದ ಅಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದವರ ವಿವರ ಹಾಗೂ ದೂರವಾಣಿ ಸಂಖ್ಯೆಗಳು.**

| ಕ್ರ. ಸಂ. | ಶ್ರೀಯುತರ ಹೆಸರು ಮತ್ತು ಹುದ್ದೆ | ಕಛೇರಿ ದೂರವಾಣಿ ಸಂಖ್ಯೆ | ಮೊಬೈಲ್ ಸಂಖ್ಯೆ |
|---|---|---|---|
| 1) | ಹೆಚ್.ವಿ. ನಂಜೇಶಯ್ಯ – ಕಾರ್ಯಪಾಲಕ ಇಂಜಿನಿಯರ್ | 222942 | 9741779587 |
| 2) | ಎನ್.ಜೆ. ವಿರೂಪಾಕ್ಷಪ್ಪ – ತಾಂತ್ರಿಕ ಸಹಾಯಕರು | 222942 | 9980446808 |
| 3) | ಬಿ.ಇ. ಅಣ್ಣಪ್ಪ – ಸಹಾಯಕ ಇಂಜಿನಿಯರ್ | 222942 | 9844536598 |
| 4) | ಕೆ.ವಿ. ಮಂಜುನಾಥ್ – ಸಹಾಯಕ ಇಂಜಿನಿಯರ್ | 222942 | 9448924671 |
| 5) | ಲೇಖಪ್ಪ – ಲೆಕ್ಕ ಅಧೀಕ್ಷಕರು | 222942 | 9844748069 |
| 6) | ಜಿ. ಶಶಿಧರ್ – ಪ್ರ.ದ.ಸ. | 222942 | 9900800720 |
| 7) | ಕೆ.ಕೆ. ಶಿವಕುಮಾರಸ್ವಾಮಿ – ಪ್ರ.ದ.ಲೆ.ಸ. | 222942 | 9448105983 |
| 8) | ಆರ್. ಉಮಾಶಂಕರ್ – ದ್ವಿ.ದ.ಸ. | 222942 | 9902332513 |

**ನಿಯೋಜನೆ ಮೇಲಿನ ಸಿಬ್ಬಂದಿಗಳು**

| | | | |
|---|---|---|---|
| 1) | ಜಿ.ಎಸ್. ಜಯದೇವರಾಧ್ಯ – ಸಹಾಯಕ ಇಂಜಿನಿಯರ್ | 222942 | 9480070426 |
| 2) | ಸಿ.ಎಸ್. ಸತೀಶ್ – ದ್ವಿ.ದ.ಸ. | 222942 | 9480023768 |
| 3) | ಲೋಕೇಶ್‌ರಾವ್ (ಕ್ಲೀನರ್) | 222942 | --- |

**X. ನಿಯಮಾನುಸಾರ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು ಪಡೆಯುತ್ತಿರುವ ಮಾಸಿಕ ವೇತನ ವಿವರಗಳು:**

| ಕ್ರ. ಸಂ. | ಶ್ರೀಯುತರ ಹೆಸರು | ಪದನಾಮ | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1) | ಹೆಚ್.ವಿ. ನಂಜೇಶಯ್ಯ | ಕಾರ್ಯಪಾಲಕ ಇಂಜಿನಿಯರ್ | 18150–26925 | 25650 |
| 2) | ಎನ್.ಜೆ. ವಿರೂಪಾಕ್ಷಪ್ಪ | ತಾಂತ್ರಿಕ ಸಹಾಯಕರು | 14050–25050 | 24450 |
| 3) | ಬಿ.ಇ. ಅಣ್ಣಪ್ಪ | ಸಹಾಯಕ ಇಂಜಿನಿಯರ್ | 11400–21600 | 11400 |
| 4) | ಕೆ.ವಿ. ಮಂಜುನಾಥ್ | ಸಹಾಯಕ ಇಂಜಿನಿಯರ್ | 11400–21600 | 11400 |
| 5) | –ಖಾಲಿ– | ಕಿರಿಯ ಇಂಜಿನಿಯರ್ | 8825–16000 | 8825 |
| 6) | ಲೇಖಪ್ಪ | ಲೆಕ್ಕ ಅಧೀಕ್ಷಕರು | 10000–18150 | 12300 |
| 7) | –ಖಾಲಿ– | ಅಧೀಕ್ಷಕ | 10000–18150 | 10000 |
| 8) | ಜಿ. ಶಶಿಧರ್ | ಪ್ರ.ದ.ಸ. | 7275–13350 | 8825 |
| 9) | ಆರ್. ಉಮಾಶಂಕರ್ | ದ್ವಿ.ದ.ಸ. | 5800–10500 | 6125 |
| 10) | –ಖಾಲಿ– | ದ್ವಿ.ದ.ಸ. | 5800–10500 | 5800 |
| 11) | ಕೆ.ಕೆ. ಶಿವಕುಮಾರಸ್ವಾಮಿ | ಪ್ರ.ದ.ಲೆ.ಸ. | 7275–13350 | 9050 |
| 12) | –ಖಾಲಿ– | ದ್ವಿ.ದ.ಲೆ.ಸ. | 5800–10500 | 5800 |
| 13) | –ಖಾಲಿ– | ದ್ವಿ.ದ.ಲೆ.ಸ. | 5800–10500 | 5800 |
| 14) | –ಖಾಲಿ– | ಕಂಪ್ಯೂಟರ್ ಅನಾಲಿಸ್ಟ್ | 5800–10500 | 5800 |
| 15) | –ಖಾಲಿ– | ಚಾಲಕ | 5800–10500 | 5800 |
| 16) | –ಖಾಲಿ– | ಡಿ ದರ್ಜೆ ನೌಕರರು | 4800–7275 | 4800 |
| 17) | –ಖಾಲಿ– | ಡಿ ದರ್ಜೆ ನೌಕರರು | 4800–7275 | 4800 |
| 18) | –ಖಾಲಿ– | ಕಾವಲುಗಾರ | 4800–7275 | 4800 |

**XI. 2009–10 ನೇ ಸಾಲಿನ ಆಯವ್ಯಯದಲ್ಲಿ ಲೋ.ಇ. ವಿವಿಧ ಯೋಜನಾವಾರು ವಿವಿಧ ಲೆಕ್ಕ ಶೀರ್ಷಿಕೆಯಡಿಯಲ್ಲಿ ನಿಗದಿಪಡಿಸಲಾದ ಅನುದಾನದ ವಿವರಗಳು:**

ಅ) 2009–10 ನೇ ಸಾಲಿನಲ್ಲಿ ವಿಶೇಷ ವಿಭಾಗ ಶಿವಮೊಗ್ಗಕ್ಕೆ ಆಯವ್ಯಯ ಕಟ್ಟಡ ಕಾಮಗಾರಿಗಳಿಗೆ ಒದಗಿಸಲಾದ ಅನುದಾನದ ವಿವರ:

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | 2009–10 ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1. | 4059 ನ್ಯಾಯಾಂಗ ಆಡಳಿತ (ಕೇಂದ್ರ ಪುರಸ್ಕೃತ ಯೋಜನೆ) | 50.00 |
| 2. | 4059 ನ್ಯಾಯಾಂಗ ಆಡಳಿತ (ರಾಜ್ಯವಲಯ ಯೋಜನೆ) | 40.00 |
| 3. | 4059 ಕಾರಾಗೃಹ | – |
| 4. | 4059 ಲೋಕೋಪಯೋಗಿ | 400.00 |
| 5. | 4059 ಅಗ್ನಿಶಾಮಕ ಮತ್ತು ರಕ್ಷಣೆ | – |

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | 2009–10 ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 6. | 4059 ಜಿಲ್ಲಾಡಳಿತ | 75.00 |
| 7. | 4059 ಅಬಕಾರಿ | – |
| 8. | 4059 ವಾಣಿಜ್ಯ ತೆರಿಗೆ | 50.00 |
| 9. | 4202 ಸೆಕೆಂಡರಿ ಶಿಕ್ಷಣ | 50.00 |
| 10. | 4202 ಉನ್ನತ ಶಿಕ್ಷಣ | 175.00 |
| 11. | 4202 ತಾಂತ್ರಿಕ ಶಿಕ್ಷಣ | 70.00 |
| 12. | 4216 ನ್ಯಾಯಾಂಗ ಆಡಳಿತ (ಕೇಂದ್ರ ಪುರಸ್ಕೃತ ಯೋಜನೆ) | 25.00 |
| 13. | 4059 ಇತರೆ | 50.00 |
| 14. | 4059 ಆರ್.ಟಿ.ಓ. | 25.00 |
| 15. | 4216 ಇತರೆ | 50.00 |

ಆ) 2009–10 ನೇ ಸಾಲಿನಲ್ಲಿ ಶಿವಮೊಗ್ಗ ವಿಶೇಷ ವಿಭಾಗಕ್ಕೆ ಆಯವ್ಯಯ ರಸ್ತೆ ಮತ್ತು ಸೇತುವೆ ಕಾಮಗಾರಿಗಳಿಗೆ ಒದಗಿಸಲಾದ ಅನುದಾನದ ವಿವರ:

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | 2009–10 ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1. | 5054 ಅಭಿವೃದ್ಧಿ ಹಾಗೂ ಡಾಂಬರೀಕರಣ | 80.00 |
| 2. | 5054 ಸೇತುವೆಗಳ ನಿರ್ಮಾಣ | 100.00 |
| 3. | 5054 ಇತರೆಸ್ತೆ ನಿರ್ಮಾಣ | 1500.00 |
| 4. | 5054 ಕೇಂದ್ರ ರಸ್ತೆನಿಧಿ | 15.00 |
| 5. | 5054 ನಬಾರ್ಡ್ ಯೋಜನೆ | 425.00 |
| 6. | 5054 ರಸ್ತೆ ಮತ್ತು ಸೇತುವೆ ಯೋಜನೆ | 450.00 |

**XII. ಸಹಾಯಧನ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ವಿಧಾನ ಅದಕ್ಕಾಗಿ ನಿಗಧಿಗೊಳಿಸಲಾದ ಮೊತ್ತ ಮತ್ತು ಫಲಾನುಭವಿಗಳ ವಿವರ:**

–ಯಾವುದು ಇರುವುದಿಲ್ಲ–

**XIII. ರಿಯಾಯಿತಿಗಳನ್ನು ಪಡೆಯುವವರ ಅಧಿಕಾರ ಪತ್ರಗಳನ್ನು ಮಂಜೂರು ಮಾಡುವ ಬಗ್ಗೆ ವಿವರ:**

–ಯಾವುದು ಇರುವುದಿಲ್ಲ–

**XIV. ವಿದ್ಯುನ್ಮಾನ ವ್ಯವಸ್ಥೆಯಲ್ಲಿ ಲಭ್ಯವಿರುವ ಮಾಹಿತಿಗಳ ವಿವರಗಳು:**

Website: spdivision@gmail.com

**XV. ಸಾರ್ವಜನಿಕ ಉಪಯೋಗಕ್ಕಾಗಿ ಪುಸ್ತಕ ಭಂಡಾರ ಅಥವಾ ವಾಚನಾಲಯವನ್ನು ನಿರ್ವಹಿಸುತ್ತಿದ್ದಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಅಲ್ಲಿ ದೊರೆಯುವ ಸೌಲಭ್ಯಗಳು ಮತ್ತು ಕೆಲಸದ ಅವಧಿಯ ವಿವರಗಳು:**

–ಯಾವುದು ಇರುವುದಿಲ್ಲ–

**XVI. ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು (ಹುದ್ದೆ ಇತ್ಯಾದಿ ವಿವರಗಳು) ಮಾಹಿತಿ ಹಕ್ಕು ಅಧಿನಿಯಮ 2005 (ಕೇಂದ್ರ ಅಧಿನಿಯಮ 22) ರ ಸೆಕ್ಷನ್ 5 (2) ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಲೋ. ಇಲಾಖೆಗೆ ಸಂಬಂಧಿಸಿದಂತೆ ಈ ಕಛೇರಿಯ ಕೆಳಕಂಡ ಅಧಿಕಾರಿಗಳನ್ನು ಸಾರ್ವಜನಿಕ / ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಎಂದು ನೇಮಕ ಮಾಡಲಾಗಿದೆ.**

1) ಶ್ರೀ ಹೆಚ್.ವಿ. ನಂಜೇಶಯ್ಯ – ಕಾರ್ಯಪಾಲಕ ಇಂಜಿನಿಯರ್ : ಸಾರ್ವಜನಿಕ ಮಾಹಿತಿ ಅಧಿಕಾರಿ.

2) ಶ್ರೀ ಎನ್.ಜೆ. ವಿರೂಪಾಕ್ಷಪ್ಪ – ತಾಂತ್ರಿಕ ಸಹಾಯಕರು : ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ.

**XVII. ನಿಗಧಿಗೊಳಿಸಲಾಗುವ ಇತರೆ ಮಾಹಿತಿಗಳು:** ಸರ್ಕಾರವು ಮಾಹಿತಿ ಪಡೆಯುವ ಹಕ್ಕು ಅಧಿನಿಯಮಗಳನ್ನು ರಚಿಸಿದ ನಂತರ ಅದರಲ್ಲಿ ಬೇರೆ ಯಾವುದಾದರೂ ಮಾಹಿತಿಗಳನ್ನು ನಿಗಧಿಗೊಳಿಸಿದಲ್ಲಿ ಅದನ್ನು ಅಳವಡಿಸಲಾಗುವುದು.

**ಹೆಚ್.ವಿ. ನಂಜೇಶಯ್ಯ**
ಕಾರ್ಯಪಾಲಕ ಇಂಜಿನಿಯರ್
ಲೋಕೋಪಯೋಗಿ ಇಲಾಖೆ,
ವಿಶೇಷ ವಿಭಾಗ, ಶಿವಮೊಗ್ಗ.

ಪಿ.ಆರ್.862

**ಅಧಿಕಾರಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು, ಶಿರಸಿ ವಿಭಾಗ, ಶಿರಸಿ ಇವರ ನಡಾವಳಿಗಳು**

**ವಲಯ ಅರಣ್ಯಾಧಿಕಾರಿ, ಶಿರಸಿವಲಯ, ಶಿರಸಿ ಇವರ ಅರಣ್ಯ ಮೊಕದ್ದಮೆ ಸಂಖ್ಯೆ:1/91–92, ದಿನಾಂಕ:12ನೇ ಜೂನ್, 1991**

**ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಯಿಂದ (ಜಿ) ವರೆಗೆ ಉಪಸ್ಥಿತಿ**

ಮನೋಜಕುಮಾರ., ಭಾ.ಅ.ಸೇ.,
ಅಧಿಕಾರಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿರಸಿ ವಿಭಾಗ, ಶಿರಸಿ.
ವಲಯ ಅರಣ್ಯಾಧಿಕಾರಿ, ಶಿರಸಿ ವಲಯ, ಶಿರಸಿ ಫಿರ್ಯಾದಿದಾರರು...
(ಪ್ರತಿನಿಧಿಸಿದವರು: ಸಹಾಯಕ ಸರ್ಕಾರಿ
ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಶಿರಸಿ)
1) ಶ್ರೀ ಗೋಪಾಲ ತಿಮ್ಮಮಡಿವಾಳ, ಸಂಪಖಂಡ ಅರ್ಜಿದಾರರು...
2) ಶ್ರೀ ಹಜಿರಾಬಿ ಕೋಂ ಅಬ್ದುಲ್ ಜಲೀಲ ಹಸನಸಾಬ, ಗೌಡಳ್ಳಿ.

**ಪ್ರಕರಣದ ಹಿನ್ನೆಲೆ:**

ದಿನಾಂಕ:12.06.1991 ರಂದು ವಲಯ ಅರಣ್ಯಾಧಿಕಾರಿ, ಶಿರಸಿವಲಯ, ಶಿರಸಿ ಮತ್ತು ಸಿಬ್ಬಂದಿಯವರು ಶಿರಸಿ ನಗರದ ಹುಬ್ಬಳ್ಳಿ ಪಿಡಬ್ಲ್ಯೂಡಿ ರಸ್ತೆಯ ಹತ್ತಿರ ಬರುತ್ತಿದ್ದ ರಿಕ್ಷಾವನ್ನು ಕೈ ಮಾಡಿ ತಡೆದಾಗ ನಿಲ್ಲಿಸದೇ ಇದ್ದುದರಿಂದ ಬೆನ್ನಟ್ಟಿ ಬಂದಾಗ, ಮಾರಿಗುಡಿ ಹತ್ತಿರ ಭಾರತ್ ಲಾಡ್ಜ್ ಎದುರುಗಡೆ ರಿಕ್ಷಾವನ್ನು ನಿಲ್ಲಿಸಿ ಇಬ್ಬರು ಓಡಿ ಹೋದದ್ದು ಕಂಡುಬಂತು ಹಾಗೂ ಒಬ್ಬ ಡ್ರೈವರ ಸಿಕ್ಕಿಬಿದ್ದನು. ಆತನ ಹೆಸರು ಕೇಳಲಾಗಿ ಅಬ್ದುಲ್ ರೆಹಮಾನ ಹಸನಸಾಬ, ಗೌಡಳ್ಳಿ ಎಂದು ಉತ್ತರಿಸಿದನು. ಹಾಗೂ ಓಡಿಹೋದವರ ಹೆಸರು ಅಬ್ದುಲ್ ಜಲೀಲ ಹಸನಸಾಬ ಹಾಗೂ ಸನಾವುಲ್ಲಾ ಮರ್ದನ್ ಸಾಬ, ಗೌಡಳ್ಳಿ ಎಂಬುದಾಗಿ ತಿಳಿಸಿದನು. ಸದರಿ ರಿಕ್ಷಾವನ್ನು ಪರಿಶೀಲಿಸಿದಾಗ ಎರಡು ಬೀಟೆ ಜಾತಿಯ ಕೊರೆದ ನಡೆಗಳು ಹಾಗೂ ಏಳು ನಂದಿ ಜಾತಿಯ ಕೊರೆದ ನಡೆಗಳು ಇದ್ದು ಪಾಸ್ ವ ಪರ್ಮಿಟ್ ಇಲ್ಲದೇ ಇದ್ದುದು ಕಂಡುಬಂತು. ವಾಹನದ ಸಂಖ್ಯೆ ನೋಡಲಾಗಿ ಪ್ಯಾಸೆಂಜರ್ ರಿಕ್ಷಾ ನಂ.ಎಂವೈಇ–4656 ಆಗಿತ್ತು. ಈ ಕೃತ್ಯದ ಬಗ್ಗೆ 1963ರ ಕರ್ನಾಟಕ ಅರಣ್ಯ ಕಾಯ್ದೆ 24E, 50(2)K, 62(1)(3), 71(A) ಯಿಂದ (G), 80, 81, 104A, 104D ಕರ್ನಾಟಕ ಅರಣ್ಯ ನಿಯಮ 1969 ಕಲಂ 163, 144ರ ಅಡಿಯಲ್ಲಿ ಅರಣ್ಯ ಮೊಕದ್ದಮೆ, 1/91–92 ದಿನಾಂಕ:12.06.1991ನ್ನು ದಾಖಲಿಸಿ, ವಾಹನ ಹಾಗೂ ಸದರಿ ಉತ್ಪನ್ನಗಳ ಸಹಿತ ಈ ಪ್ರಾಧಿಕಾರದ ಸಮಕ್ಷಮ ಹಾಜರುಪಡಿಸಿ 1963ರ ಕರ್ನಾಟಕ ಅರಣ್ಯ ಕಾಯ್ದೆ 71(ಎ)ರ ಪ್ರಕಾರ ಕೈಗೊಳ್ಳಲು ವಲಯ ಅರಣ್ಯಾಧಿಕಾರಿ, ಶಿರಸಿ ವಲಯ, ಶಿರಸಿ ಇವರು ಕೋರಿರುತ್ತಾರೆ.

ಶ್ರೀಮತಿ ಹಾಜರಾಬಿ ಕೋಂ ಅಬ್ದುಲ್ ಜಲೀಲ ಇವರು ಅರ್ಜಿ ಸಲ್ಲಿಸಿ, ಅರಣ್ಯ ಇಲಾಖೆಯವರು ಜಪ್ತಿಪಡಿಸಿರುವ ವಾಹನ ರಿಕ್ಷಾ ನಂ.ಎಂವೈಇ–4656 ಇದು ತನ್ನ ಗಂಡ ಶ್ರೀ ಅಬ್ದುಲ್ ಜಲೀಲರವರಾಗಿದ್ದು, ಅವರು ದಿನಾಂಕ:02.07.1991 ರಂದು ಮರಣಹೊಂದಿದ್ದಾಗಿ (ಮರಣ ಪ್ರಮಾಣ ಪತ್ರ ಸಲ್ಲಿಸಿರುತ್ತಾರೆ.) ಸದರಿ ವಾಹನವನ್ನು ತನ್ನ ಹಾಗೂ ತನ್ನ ಮಕ್ಕಳ ಜೀವನೋಪಾಯಕ್ಕಾಗಿ ಬಿಟ್ಟುಕೊಡಬೇಕಾಗಿ ವಿನಂತಿಸಿಕೊಂಡಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಾರವಾರ ಇವರಿಗೆ ವಾಹನದ ನೋಂದಾಯಿತ ಮಾಲೀಕರ ಬಗ್ಗೆ ಮಾಹಿತಿ ಕೇಳಿದಾಗ ಅವರು ಗೋಪಾಲ ತಿಮ್ಮ ಮಡಿವಾಳ ಸಾ: ಸಂಪಖಂಡ ಎಂದು ತಿಳಿಸಿರುತ್ತಾರೆ. ಗೋಪಾಲ ತಿಮ್ಮ ಮಡಿವಾಳ ಇವರು ಸದರಿ ವಾಹನವನ್ನು ದಿನಾಂಕ:05.09.1985 ರಂದು ಸೇತು ಮಾದವನ್ ಎನ್. ನಾಯರ್, ಎಂಬುವವರಿಗೆ ಮಾರಾಟ ಮಾಡಿದ್ದಾಗಿ, ಆದಾಗ್ಯೂ ತಮಗೆ ಬಿಟ್ಟು ಕೊಡಬೇಕಾಗಿ ಅರ್ಜಿ ಸಲ್ಲಿಸಿರುತ್ತಾರೆ.

ಅದರಂತೆ, ಶ್ರೀಮತಿ ಹಜಿರಾಬಿ ಕೋಂ ಅಬ್ದುಲ್ ಜಲೀಲ ಸಾ:ಗೌಡಳ್ಳಿ ಹಾಗೂ ಶ್ರೀ ಗೋಪಾಲ ತಿಮ್ಮ ಮಡಿವಾಳ ಸಾ: ಸಂಪಖಂಡ ಇವರುಗಳಿಗೆ ಈ ಕಛೇರಿ ನ್ಯಾಯಾಲಯದ ವಿಚಾರಣೆ ನೋಟೀಸ್ ದಿನಾಂಕ:29.10.1991, 20.06.1995, 24.01.2004, 22.07.2006 ಹಾಗೂ 25.11.2006 ಗಳಂದು ಜಾರಿ ಮಾಡಿದ್ದು ವಾಹನ ಮಾಲೀಕರು ಅಥವಾ ಅವರ ಪರ ವಕೀಲರು ಹಾಜರಾಗಿದ್ದು ಇರುವುದಿಲ್ಲ. ಸದರಿ ಪ್ರಕರಣದ ವಿಚಾರಣೆಯನ್ನು ಅಂತಿಮವಾಗಿ ದಿನಾಂಕ:01.08.2009 ರಂದು

ನಡೆಸಿ ಲಭ್ಯವಿರುವ ದಾಖಲೆಗಳಾದ ಎಫ್.ಐ.ಆರ್.ಇ.ಆರ್. ತಪಾಸಣಾ ವರದಿ, ಆರೋಪಿ ಹೇಳಿಕೆಗಳನ್ನು ಪರಿಗಣಿಸಿದ ನಂತರ ಈ ಕೆಳಗಿನ ಅಂಶಗಳನ್ನು ನಿರ್ಧರಿಸಬೇಕಾಗಿದೆ.

1) ಸದರಿ ವಾಹನವು ಬೀಟೆ ಸಾಗಾಣಿಕೆ ಮಾಡುವಾಗ ಅಮಾನತ್ತುಪಡಿಸಲಾಗಿದೆಯೇ?

2) ಅರಣ್ಯ ಅಪರಾಧದಲ್ಲಿ ವಾಹನದ ಮಾಲೀಕರು ಅಥವಾ ಅವರ ಚಾಲಕರು ಉದ್ದೇಶ ಪೂರ್ವಕವಾಗಿಯೇ ತಿಳಿದು ಭಾಗಿಯಾಗಿದ್ದಾರೆಯೇ?

3) ವಾಹನದ ಮಾಲೀಕರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಚಾಲಕ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡಿದ್ದಾರೆಯೇ?

4) ಅಪರಾಧದಲ್ಲಿ ಭಾಗಿಯಾಗಿದೆ ಎಂದು ಹೇಳಿರುವ ವಾಹನವನ್ನು ಅರ್ಜಿದಾರರ ಕೋರಿಕೆಯಂತೆ ಅಂತಿಮವಾಗಿ ಬಿಡುಗಡೆಗೊಳಿಸಬಹುದೆ?

**ಮೇಲಿನ ಅಂಶಗಳಿಗೆ ನನ್ನ ಉತ್ತರ ಇಂತಿದೆ:**

1) ಸಕಾರಾತ್ಮಕವಾಗಿದೆ.

2) ಸಕಾರಾತ್ಮಕವಾಗಿದೆ.

3) ನಕಾರಾತ್ಮಕವಾಗಿದೆ.

4) ಅಂತಿಮ ಆದೇಶದಂತೆ.

**ಅಂಶ–1:** ದಿನಾಂಕ:12.06.1991 ರಂದು ವಲಯ ಅರಣ್ಯಾಧಿಕಾರಿ, ಶಿರಸಿವಲಯ, ಶಿರಸಿ ಮತ್ತು ಸಿಬ್ಬಂದಿಯವರು ಶಿರಸಿ ನಗರದ ಹುಬ್ಬಳ್ಳಿ ಪಿಡಬ್ಲ್ಯೂಡಿ ರಸ್ತೆಯ ಹತ್ತಿರ ಬರುತ್ತಿದ್ದ ರಿಕ್ಷಾವನ್ನು ಕೈ ಮಾಡಿ ತಡೆದಾಗ ನಿಲ್ಲಿಸದೇ ಇದ್ದುದರಿಂದ ಬೆನ್ನಟ್ಟಿ ಬಂದಾಗ, ಮಾರಿಗುಡಿ ಹತ್ತಿರ ಭಾರತ್ ಲಾಡ್ಜ್ ಎದುರುಗಡೆ ರಿಕ್ಷಾವನ್ನು ನಿಲ್ಲಿಸಿ ಇಬ್ಬರು ಓಡಿ ಹೋದದ್ದು ಕಂಡುಬಂತು ಹಾಗೂ ಒಬ್ಬ ಡ್ರೈವರ್ ಸಿಕ್ಕಿಬಿದ್ದನು. ಆತನ ಹೆಸರು ಕೇಳಲಾಗಿ, ಅಬ್ದುಲ್ ರೆಹಮಾನ ಹಸನಸಾಬ, ಗೌಡಳ್ಳಿ ಎಂದು ಉತ್ತರಿಸಿದನು. ಹಾಗೂ ಓಡಿಹೋದವರ ಹೆಸರು ಅಬ್ದುಲ್ ಜಲೀಲ ಹಸನಸಾಬ ಹಾಗೂ ಸನಾವುಲ್ಲಾ ಮರ್ದನ್ ಸಾಬ, ಗೌಡಳ್ಳಿ ಎಂಬುದಾಗಿ ತಿಳಿಸಿದನು. ಸದರಿ ರಿಕ್ಷಾವನ್ನು ಪರಿಶೀಲಿಸಿದಾಗ ಎರಡು ಬೀಟೆ ಜಾತಿಯ ಕೊರೆದ ನಡೆಗಳು ಹಾಗೂ ಏಳು ನಂದಿ ಜಾತಿಯ ಕೊರೆದ ನಡೆಗಳು ಇದ್ದು ಪಾಸ್ ವ ಪರ್ಮಿಟ್ ಇಲ್ಲದೇ ಇದ್ದುದು ಕಂಡುಬಂದಿದೆ. ವಾಹನದ ಸಂಖ್ಯೆ ನೋಡಲಾಗಿ ಪ್ಯಾಸೆಂಜರ್ ರಿಕ್ಷಾ ನಂ.ಎಂವೈಇ–4656 ಆಗಿತ್ತು. ಈ ಕೃತ್ಯದ ಬಗ್ಗೆ 1963ರ ಕರ್ನಾಟಕ ಅರಣ್ಯ ಕಾಯ್ದೆ 24E, 50(2)K, 62(1)(3), 71(A) ಯಿಂದ (G), 80, 81, 104A, 104D ಕರ್ನಾಟಕ ಅರಣ್ಯ ನಿಯಮ 1969 ಕಲಂ 163, 144ರ ಅಡಿಯಲ್ಲಿ ಅರಣ್ಯ ಮೊಕದ್ದಮೆ, 1/91–92 ದಿನಾಂಕ:12.06.1991ನ್ನು ದಾಖಲಿಸಿ, ಘಟನೆ ನಡೆದ ಸ್ಥಳದಲ್ಲೇ ಇದ್ದ ಶ್ರೀ ರಾಮವೀರಭದ್ರ ಶಿರಸಿಕರ್, ಟಿ.ಎಸ್.ಎಸ್. ರಸ್ತೆ, ಶಿರಸಿ ಹಾಗೂ ಶ್ರೀ ಚೆನ್ನಬಸಪ್ಪನಾಯ್ಕ, ಟಿ.ಎಸ್.ಎಸ್.ರಸ್ತೆ, ಶಿರಸಿ ಇವರುಗಳನ್ನು ಪಂಚರಾಗಿ ಹೇಳಿಕೆ ಪಡೆದುಕೊಳ್ಳಲಾಗಿದೆ. ಅಮಾನತ್ತುಪಡಿಸಿಕೊಂಡ ಪದಾರ್ಥಗಳು ಎರಡು ಬೀಟೆ ಜಾತಿಯ ಹಾಗೂ ಏಳು ನಂದಿ ಜಾತಿಯ ಹಲಗೆಗಳಿರುವುದನ್ನು ತಾವುಗಳು ಪರೀಕ್ಷಿಸಿ ದೃಢಪಡಿಸಿಕೊಂಡಿದ್ದಾಗಿ ಪಂಚರು ಹೇಳಿಕೆ ನೀಡಿರುತ್ತಾರೆ. ಹಾಗೂ ಅವುಗಳ ಮೇಲೆ ಯಾವುದೇ ಛಾಪಾ ವಗೈರೆ ಇರುವುದಿಲ್ಲವೆಂದು, ರಹದಾರಿ ಇಲ್ಲವೆಂದು ಸವಿಸ್ತಾರವಾಗಿ ನುಡಿದಿರುತ್ತಾರೆ.

ಜಪ್ತಿಪಡಿಸಿದ ಕೊರೆದ ನಡೆಗಳ ಅಳತೆ ಮಾಡಲಾಗಿ ವಿವರ ಈ ಕೆಳಗಿನಂತಿದೆ.

| ಅ.ನಂ. | ಜಾತಿ | ಉದ್ದ | ಅಗಲ ಮೀ. | ದಪ್ಪ ಮೀ. | ನಡೆ |
|---|---|---|---|---|---|
| 1. | ಬೀಟೆ | 2.78x | 0.10x | 0.04 | 2 |
| 2. | ನಂದಿ | 2.18x | 0.24x | 0.03 | 7 |
| | | | | **ಅಂತೂ:** | **9 ನಡೆಗಳು** |

**ಅಂಶ–II-III** ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ ವರದಿಯಂತೆ ಶ್ರೀ ಗೋಪಾಲ ತಿಮ್ಮ ಮಡಿವಾಳ ಸಾ:ಸಂಪಖಂಡ ಇವರಿಗೆ ಜಪ್ತಾದ ವಾಹನ ಆಟೋ ರಿಕ್ಷಾ ಎಂವೈಇ–4656 ಸೇರಿದ್ದಾಗಿರುತ್ತದೆ. ಸದರಿಯವರು ತನ್ನ ವಾಹನವನ್ನು ದಿನಾಂಕ:05.09.1985 ರಂದು ಶಿರಸಿಯ ಶ್ರೀ ಸೇತು ಮಾದವನ್ ಎನ್. ನಾಯರ್ ಎಂಬುವವರಿಗೆ, ಅವರು ದಿನಾಂಕ:11.07.1989 ರಂದು ಶ್ರೀ ಅಬ್ದುಲ್ ಜಲೀಲ್ ಹಸನ್ ಸಾಬ್ ಸಾ:ಗೌಡಳ್ಳಿ ಎಂಬುವವರಿಗೆ ಮಾರಾಟ ಮಾಡಿದ್ದಾಗಿ ಹಾಗೂ ಸದರಿ ವಾಹನವನ್ನು ಶ್ರೀ ಅಬ್ದುಲ್ ಜಲೀಲ್ ಹಸನ್ ಸಾಬ್ ಸಾ:ಗೌಡಳ್ಳಿ ಇವರಿಗೆ ಅಥವಾ ವಾರಸುದಾರರಿಗೆ ಬಿಟ್ಟುಕೊಡಲು ತನ್ನ ತಕರಾರು ಇಲ್ಲವಾಗಿ ಈ ಪ್ರಾಧಿಕಾರಕ್ಕೆ ಒಪ್ಪಿಗೆ ನೀಡಿರುತ್ತಾರೆ.

ವಾಹನದ ಮಾಲೀಕರುಗಳಿಗೆ ಸಾಕಷ್ಟು ಕಾಲಾವಕಾಶ ಕೊಟ್ಟಿದ್ದರೂ ಸಹ ಈ ಪ್ರಾಧಿಕಾರದ ಮುಂದೆ ಬಂದು ಸಾಕ್ಷಿ ನುಡಿಯಲು ವಿಫಲರಾಗಿರುತ್ತಾರೆ. ವಾಹನವನ್ನು ಅಮಾನತ್ತುಗೊಳಿಸುವಾಗ ಓಡಿಹೋದ ಅಪರಾಧಿಗಳಲ್ಲಿ ಅಬ್ದುಲ್ ಜಲೀಲ್ ಹಸನ್ ಸಾಬ್, ಸಾ:ಗೌಡಳ್ಳಿ, ಒಬ್ಬರಾಗಿದ್ದು ಅವರೇ ವಾಹನ ಮಾಲೀಕರಾಗಿದ್ದು ಅವರ ಪ್ರಜ್ಞಾಪೂರ್ವಕವಾಗಿಯೇ ವಾಹನವು

ಈ ಅಪರಾಧದಲ್ಲಿ ಭಾಗಿಯಾಗಿರುವುದು ಕಂಡುಬರುತ್ತದೆ. ಹಾಗೂ ಮುನ್ನೆಚ್ಚರಿಕೆ ಕ್ರಮಗಳನ್ನು ತೆಗೆದುಕೊಂಡಿರುವುದು ಕಂಡುಬಂದಿರುವುದಿಲ್ಲ.

ಈ ಪ್ರಕರಣದ ಬಗ್ಗೆ ಈ ಪ್ರಾಧಿಕಾರವು ದಿನಾಂಕ:29.10.1991, 20.06.1995, 24.01.2004, 22.07.2006, 25.11.2006 ಹಾಗೂ 01.08.2009 ಗಳಂದು ವಿಚಾರಣೆ ನಿಗದಿಪಡಿಸಿ, ವಾಹನ ಮಾಲೀಕರಾದ ಅಬ್ದುಲ್ ಜಲೀಲ್ ಹಸನ್ ಸಾಬ, ಸಾ:ಗೌಡಳ್ಳಿ ಇವರ ವಾರಸುದಾರರಾಗಿರುವ, ಶ್ರೀಮತಿ ಹಜಿರಾಬಿ ಕೋಂ ಅಬ್ದುಲ್ ಜಲೀಲ್ ಸಾ:ಗೌಡಳ್ಳಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಹೆಸರಿಸಲ್ಪಟ್ಟಿರುವ ಶ್ರೀ ಗೋಪಾಲ ತಿಮ್ಮ ಮಡಿವಾಳ ಸಾ: ಸಂಪಖಂಡ ಇವರುಗಳಿಗೆ ನೋಂದಾಯಿತ ಅಂಚೆ ಮೂಲಕ ಸಮನ್ಸ್ ಕಳಿಸಲಾಗಿ ಅರ್ಜಿದಾರರು ಪಡೆದುಕೊಂಡಿದ್ದು ಇರುತ್ತದೆ. ಆದರೂ ಅರ್ಜಿದಾರರಾಗಲಿ ಅವರ ಪರ ವಕೀಲರಾಗಲಿ ನ್ಯಾಯಾಲಯದ ವೇಳೆಗೆ ಹಾಜರಾಗಿ ಹೇಳಿಕೆ ನೀಡಿದ್ದು ಇರುವುದಿಲ್ಲ. ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶ ಮಾಡಿದೆ.

**ಆದೇಶ**

ಈ ಮೇಲಿನ ಅಂಶಗಳ ಹಾಗೂ ವಿವರಗಳ ಹಿನ್ನೆಲೆಯಲ್ಲಿ ವಲಯ ಅರಣ್ಯಾಧಿಕಾರಿ, ಶಿರಸಿ ವಲಯ ಇವರ ಅರಣ್ಯ ಮೊಕದ್ದಮೆ ಸಂಖ್ಯೆ.1/91–92 ದಿನಾಂಕ:12.06.1991ಕ್ಕೆ ಸಂಬಂಧಿಸಿದಂತೆ ಸರ್ಕಾರದ ಪರ ಅಮಾನತ್ತುಪಡಿಸಿದ್ದ ರಿಕ್ಷಾ ನಂ.ಎಂವೈಇ–4656 ನ್ನು ಹಾಗೂ ಈ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಬೀಟೆ ಹಾಗೂ ನಂದಿ ತುಂಡುಗಳನ್ನು (9ನಡೆಗಳು) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಸದರಿ ಪ್ರಕರಣಕ್ಕೆ ಸಂಬಂಧಪಟ್ಟ ಆರೋಪಿತರ ಮೇಲೆ ದಾವೆ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಬಾಕಿ ಇದ್ದಲ್ಲಿ ಆ ದಾವೆಯ ಇತ್ಯರ್ಥದ ತನಕ ಅರಣ್ಯ ಸಂಪತ್ತನ್ನು ಕಾಯ್ದಿರಿಸತಕ್ಕದ್ದು.

ಈ ಆದೇಶ ತಲುಪಿದ ಮೂವತ್ತು (30) ದಿನಗಳ ಒಳಗಾಗಿ ಮೇಲ್ಮನವಿ ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತವಾಗುತ್ತದೆ. ತದನಂತರ ವಾಹನವನ್ನು ಹಾಗೂ ಜಪ್ತು ಮಾಲನ್ನು ಕಾನೂನು ರೀತ್ಯಾ ವಿಲೇಗೊಳಿಸಲು ಆದೇಶಿಸಲಾಗಿದೆ. ಈ ಆದೇಶವನ್ನು ಈ ಪ್ರಾಧಿಕಾರದ ಮೊಹರು ಹಾಕಿ ದಿನಾಂಕ:10.08.2009ರಂದು ಹೊರಡಿಸಲಾಗಿದೆ.

**ಮನೋಜಕುಮಾರ., ಭಾ.ಆ.ಸೇ.**
ಅಧಿಕಾರಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಶಿರಸಿ ವಿಭಾಗ, ಶಿರಸಿ.

ಪಿ.ಆರ್.845

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಡಬ್ಲ್ಯೂಸಿಎ/ಸಿ.ಆರ್–13/ಎಫ್.ಸಿ./2009, ದಿನಾಂಕ:28ನೇ ಆಗಸ್ಟ್, 2009**

**ಅರ್ಜಿದಾರರು:**

1) ಸುಬ್ರಹ್ಮಣ್ಯ ಐತಾಳ್, ಬಿನ್ ದಿ॥ ಕೃಷ್ಣದೇವ ಐತಾಳ್.
2) ಗಿರಿಜಾ ಐತಾಳ್, ಕೋಂ ಸುಬ್ರಹ್ಮಣ್ಯ ಐತಾಳ್, ಹೋಲಿ ಕ್ರಾಸ್ ಆಸ್ಪತ್ರೆ, ತ್ರಾಸಿ, ಗುಜ್ಜಾಡಿ ಅಂಚೆ, ಕುಂದಾಪುರ ತಾಲ್ಲೂಕು.

**ಪ್ರತಿವಾದಿಗಳು:**

1) ರೋನಿ ಡಿ' ಸೋಜಾ ಬಿನ್ ಮೈಕಲ್ ಡಿ'ಸೋಜಾ. ವಾಸ: ಮನೆ ನಂಬರ್ 4–75, ಹಂಗಳೂರು ಅಂಚೆ, ಕುಂದಾಪುರ ತಾಲ್ಲೂಕು.
2) ನ್ಯಾಶನಲ್ ಇನ್ಸೂರೆನ್ಸ್ ಕಂ.ಲಿ., ಡಿವಿಜನಲ್ ಆಫೀಸ್, 1ನೇ ಮಹಡಿ, ಶಂಕರ ಬಿಲ್ಡಿಂಗ್ ಮೊಸ್ಕ್ಯೂ ರೋಡ್, ಉಡುಪಿ.

**ಅಧಿಸೂಚನೆ**

ಅರ್ಜಿದಾರರಾದ ಸುಬ್ರಹ್ಮಣ್ಯ ಐತಾಳ್ ಇವರು ತಮ್ಮ ಮಗನಾದ ವಿಷ್ಣುಮೂರ್ತಿ ಐತಾಳ್ ಇವರು 1ನೇ ಪ್ರತಿವಾದಿಯವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:01.08.2009 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿದ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಎಂ. ಆನಂದಮೂರ್ತಿ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್.846

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂಸಿಎ:ಎಫ್:ಎಸ್.ಆರ್–27:2009, ದಿನಾಂಕ:27ನೇ ಆಗಸ್ಟ್, 2009**

**ಅರ್ಜಿದಾರರು:**

1) ಶ್ರೀಮತಿ ಕಲ್ಯಾಣಮ್ಮ ಕೋಂ ಲೇಟ್ ಮಂಜೇಗೌಡ
2) ಗೀತಾ ಬಿನ್ ಲೇಟ್ ಮಂಜೇಗೌಡ
3) ಆರತಿ ಬಿನ್ ಲೇಟ್ ಮಂಜೇಗೌಡ
ವಾಸ: ದೇವಿನಗರ, ಹುಣಸಿನಕೆರೆ ರಸ್ತೆ, ಹಾಸನ ನಗರ.

**ಪ್ರತಿವಾದಿಗಳು:**

1) ಶ್ರೀ ಮನಸೂರ್ ಬಿನ್ ಅಹಮದ್ ಷರೀಫ್, ಅಂಬೇಡ್ಕರ್ ನಗರ, ಹಾಸನ.
2) ಯುನೈಟೆಡ್ ಇಂಡಿಯಾ ಇನ್‌ಶೂರೆನ್ಸ್ ಕಂ.ಲಿ., ಹುಣಸೂರು.

**ಪ್ರತಿನಿಧಿಸುವವರು:**

ಯುನೈಟೆಡ್ ಇಂಡಿಯಾ ಇನ್‌ಶೂರೆನ್ಸ್ ಕಂ.ಲಿ., ಹಾಸನ ಶಾಖೆ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಮಂಜೇಗೌಡ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:19.04.2009 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್**

ಪಿ.ಆರ್.847

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಹಾಸನ ಉಪವಿಭಾಗ, ಹಾಸನ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಆಂಜನೇಯ ದೇವಸ್ಥಾನ ಎದುರು, ವಿದ್ಯಾನಗರ, ದಾವಣಗೆರೆ ಇವರ ಕಾರ್ಯಾಲಯ**

**ವಿಷಯ:** ಸ್ಥಗಿತಗೊಂಡಿರುವ ಕರ್ನಾಟಕ ಪತ್ತಿನ ಸಹಕಾರ ಸಂಘ ನಿ., ದಾವಣಗೆರೆ ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** (1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಸಂಖ್ಯೆ: ಸನಿ31/ಸ್ಥಗಿತ/ಕಕ್ರೆಸಿಎಸ್/ಸಿಆರ್–03/2009–10, ದಿನಾಂಕ:23.06.2009.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯ ಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಸಂಘದ ಆಡಳಿತ ಮಂಡಳಿ ನಿರ್ದೇಶಕರ/ ಕಾರ್ಯದರ್ಶಿಯವರ ಮಾಹಿತಿ ಲಭ್ಯವಿರುವುದಿಲ್ಲ ಹಾಗೂ ಲೆಕ್ಕಪುಸ್ತಕಗಳು, ಲೆಕ್ಕಪರಿಶೋಧನಾ, ವರದಿಗಳು ಲಭ್ಯವಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–11/2009–10, ದಿನಾಂಕ:19ನೇ ಆಗಸ್ಟ್, 2009**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್., ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಕರ್ನಾಟಕ ಪತ್ತಿನ ಸಹಕಾರ ಸಂಘ ನಿ.,

ದಾವಣಗೆರೆ, ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಮೇಲ್ವಿಚಾರಕರು, 1ನೇ ವೃತ್ತ, ಡಿ.ಡಿ.ಸಿ.ಸಿ. ಬ್ಯಾಂಕ್ ನಿ., ದಾವಣಗೆರೆ. ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:19.08.2009 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಬಿ. ಕುಬೇರಪ್ಪ**
ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.850

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಕಾರ್ಮಿಕ ಭವನ, ಐ.ಟಿ.ಐ. ಆವರಣ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29

**ಸಂಖ್ಯೆ: ಡಬ್ಲ್ಯೂಸಿಎ/ಎಫ್‌ಸಿ/ಸಿ.ಆರ್–37/09, ದಿನಾಂಕ:5ನೇ ಸೆಪ್ಟೆಂಬರ್, 2009**

**ಅರ್ಜಿದಾರರು:**

1) ಶ್ರೀ ಸಿದ್ಧಗಂಗಯ್ಯ S/o ಲೇ: ದಾಸಪ್ಪ, ವರ್ಷ–55.
2) ಶ್ರೀಮತಿ ಲಕ್ಷ್ಮಮ್ಮ W/o ಸಿದ್ಧಗಂಗಯ್ಯ, ವರ್ಷ–45.
3) ಕು॥ ಮಂಗಳಮ್ಮ D/o ಸಿದ್ಧಗಂಗಯ್ಯ, ವರ್ಷ–19.

**ಪ್ರತಿವಾದಿಗಳು:**

1) ಶ್ರೀ ವಿ. ಶಿವಕುಮಾರ್ S/o ವೀರಪ್ಪ ಸೀತಾರಾಮ ಭಟ್ಟರ ಪಾಳ್ಯ, ಯಂಟಗಾನಹಳ್ಳಿ (ಅಂಚೆ), ನೆಲಮಂಗಲ (ತಾ), ಬೆಂಗಳೂರು (ಜಿ).
2) ದಿ ಮ್ಯಾನೇಜರ್, ಮೆ: ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ., ನಂ.47, ಗೋಪಾಲ್ ಕಾಂಪ್ಲೆಕ್ಸ್, 2ನೇ ಮಹಡಿ, ಬಜಾರ್ ಸ್ಟ್ರೀಟ್, ಯಶವಂತಪುರ, ಬೆಂಗಳೂರು–22.

**ಪ್ರಕಟಣೆ**

ಈ ಮೇಲೆ ನಮೂದಿಸಿರುವ ಅರ್ಜಿದಾರರು ತಾವು ಮೃತ ಶ್ರೀ ರಾಜ @ ತಿಮ್ಮರಾಜು ಇವರ ಅವಲಂಬಿತರೆಂದು, ಮೃತನು 1ನೇ ಪ್ರತಿವಾದಿ ಬಳಿ ಕ್ಲೀನರ್ & ಕೂಲಿ ಕೆಲಸ ಮಾಡುವಾಗ ಕೆಲಸದ ವೇಳೆಯಲ್ಲಿ ಹಾಗೂ ಕೆಲಸದ ಕಾರಣದಿಂದ ಉಂಟಾದ ಅಪಘಾತದಲ್ಲಿ ದಿನಾಂಕ:29.04.2009 ಮರಣ ಹೊಂದಿರುತ್ತಾರೆ ಎಂದು, ಈ ಸಂಬಂಧ ತಮಗೆ ಕಾಯ್ದೆಯ ಅನುಸಾರ ಪ್ರತಿವಾದಿಗಳಿಂದ ಬರತಕ್ಕ ಪರಿಹಾರವನ್ನು ಕೊಡಿಸಬೇಕೆಂದು ಈ ನ್ಯಾಯಾಲಯದ ಮುಂದೆ ಬೇಡಿಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ ಕಾರಣ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಮೇಲೆ ನಮೂದಿಸಿರುವ ಅರ್ಜಿದಾರರಲ್ಲದೇ, ತಾವೂ ಸಹಾ ಮೃತನ ನಿಜವಾದ "ಅವಲಂಬಿತರು" ಎಂದು ಪರಿಗಣಿಸಲು ಕೇಳಿಕೊಳ್ಳುವುದಾದರೇ, ಅಂತಹವರು ಈ ಪ್ರಕಟಣೆಯು ಈ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೇ ಇದ್ದಲ್ಲಿ, ಮೇಲ್ಕಂಡ ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಗೂ ಕಾರ್ಮಿಕ
ಅಧಿಕಾರಿ, ಉಪವಿಭಾಗ–1, ಬೆಂಗಳೂರು–560029

ಪಿ.ಆರ್.878

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯ

**ಸಂಖ್ಯೆ:ಕಾಅಗ/ಕಾನಪ/ಎಫ್–64/2009/438, ದಿನಾಂಕ:11ನೇ ಸೆಪ್ಟೆಂಬರ್, 2009**

**ಅರ್ಜಿದಾರರು:**

1) ವೀರಪ್ಪ ವೀರಭದ್ರಪ್ಪ ಕಲ್ಲೊಡಿ (ಮಗ)
2) ಪಾರವ್ವ ವೀರಪ್ಪ ಕಲ್ಲೊಡಿ R/o ಪುಟಗಾನೂರ, ತಾ:ಯಲಬುರ್ಗ, ಜಿ:ಕೊಪ್ಪಳ.

**ಪ್ರತಿವಾದಿಗಳು:**

1) ಮಹಾದೇವಪ್ಪ ಡಿ. ಬತ್ತೂರ R/o ಕರಿಯಮ್ಮ ಗುಡಿಯ ಹತ್ತಿರ, ಮುಳಗುಂದ ಜಿ: ಗದಗ.
2) ದಿ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಎಸ್.ಕೆ. ಕಾಂಪ್ಲೆಕ್ಸ್, ಕೇಶ್ವಾಪುರ, ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ವೀರಪ್ಪ ವೀರಭದ್ರಪ್ಪ ಕಲ್ಲೊಡಿ ಮತ್ತು ಪಾರವ್ವ ವೀರಪ್ಪ ಕಲ್ಲೊಡಿ ಇವರು, ತಾವು ಮೃತ ಮುದಕಪ್ಪ ವೀರಭದ್ರಪ್ಪ ಕಲ್ಲೊಡಿ ಇವರ ಮಗ ಮತ್ತು ಹೆಂಡತಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮುದಕಪ್ಪ ವಿ. ಕಲ್ಲೊಡಿ ಇವರು ಒಂದನೇ ಪ್ರತಿವಾದಿಗಳಾದ ಮಹಾದೇವಪ್ಪ ಡಿ. ಬತ್ತೂರ ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲಿ ಅಥವಾ ಅರ್ಜಿಯನ್ನಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ ಗದಗ ಹಾಗೂ
ಪಿ.ಆರ್.914 ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ– II, ವಿಜಾಪುರ ಜಿಲ್ಲೆ, ವಿಜಾಪುರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ/ಎಸ್‌ಆರ್–117/09, ದಿನಾಂಕ:12ನೇ ಆಗಸ್ಟ್, 2009**

**ಅರ್ಜಿದಾರರು:**

1) ಮನಿಷ ಮಹದೇವ ಗುಂಡ.
2) ಸುಭಾಬಾಯಿ ಉತ್ತಮ ಗುಂಡ,
ಎಲ್ಲರೂ ಇರುವುದು ಡೊಬಳೆಗಲ್ಲಿ, ವಿಜಾಪುರ.

**ಪ್ರತಿವಾದಿಗಳು:**

1) ಸಮಾಧಾನ ಭಾಗವತ ಭೋಸಲೆ,
ಟ್ರ್ಯಾಕ್ಟರ್ ಮಾಲೀಕರು, ನಂ. MH-13/AJ-0191 ಸಾ:ರೂಪಳೆ,
ತಾ: ಪಂಡರಪುರ, ಜಿ:ಸೊಲ್ಲಾಪುರ.
2) ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.,
ಎಸ್.ಎಸ್. ಫ್ರಂಟರೋಡ್, ವಿಜಾಪುರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಮಹಾದೇವ ಉತ್ತಮಗುಂಡ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:30.07.2009 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲಿ ಅಥವಾ ಅರ್ಜಿಯಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು, ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ
ಪಿ.ಆರ್.881 ಆಯುಕ್ತರು, ಉಪವಿಭಾಗ–II, ವಿಜಾಪುರ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ– II, ವಿಜಾಪುರ ಜಿಲ್ಲೆ, ವಿಜಾಪುರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ/ಎಸ್‌ಆರ್–103/09, ದಿನಾಂಕ:1ನೇ ಆಗಸ್ಟ್, 2009**

**ಅರ್ಜಿದಾರರು:**

1) ಶ್ಯಾಮಲಾ ಅಣ್ಣಾಗುಂಡ
2) ಮಂದಾಕಿನಿ ಅಮೋಲಗುಂಡ
ಸಾ: ಡೊಬಳೆಗಲ್ಲಿ, ವಿಜಾಪುರ.

**ಪ್ರತಿವಾದಿಗಳು:**

1) ಅಂಬಾದಾಸ ಸದಾಶಿವ ಸೂರವಳಿ,
ಆಟೋ ರಿಕ್ಷಾ ನಂ. MH-13/G-4327 126, ಭವಾನಿಪೇಟ
ಮಡ್ಡಿವಸ್ತಿ, ಸೊಲ್ಲಾಪುರ.
2) ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ, ಎಸ್.ಎಸ್.
ಫ್ರಂಟರೋಡ್, ವಿಜಾಪುರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಅಮೋಲ ಅಣ್ಣಾಗುಂಡ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:21.04.2009 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲಿ ಅಥವಾ ಅರ್ಜಿಯಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು, ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ
ಪಿ.ಆರ್.913 ಆಯುಕ್ತರು, ಉಪವಿಭಾಗ–II, ವಿಜಾಪುರ.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** ಮೈಸೂರು ಜಿಲ್ಲೆ, ಮೈಸೂರು ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ ಚಾಮುಂಡಿಬೆಟ್ಟ ತಾಲ್ಲೂಕು ಪಂಚಾಯಿತಿ ಕ್ಷೇತ್ರದಿಂದ ಸ್ಪರ್ಧಿಸಿದ್ದ ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದಿದ್ದ ಕಾರಣ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸಿದ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಆದೇಶ ಸಂಖ್ಯೆ:ರಾಚುಆ/01(21)/ಟಿಜಡ್‌ಪಿ/2007, ಬೆಂಗಳೂರು, ದಿನಾಂಕ:31ನೇ ಆಗಸ್ಟ್, 2009**

ಮೈಸೂರು ಜಿಲ್ಲೆ, ಮೈಸೂರು ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ ಚಾಮುಂಡಿಬೆಟ್ಟ ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 (ಇನ್ನು ಮುಂದೆ ಸದರಿ ಅಧಿನಿಯಮ ಎಂದು ಹೇಳಲಾಗುವುದು) ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005 (ಇನ್ನು ಮುಂದೆ ಸದರಿ ಆದೇಶ ಎಂದು ಹೇಳಲಾಗುವುದು)ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗೊಳಗೆ ಸಲ್ಲಿಸಲು ವಿಫಲರಾಗಿದ್ದಾರೆಂದು ಮೈಸೂರು ಜಿಲ್ಲೆಯ ಜಿಲ್ಲಾಧಿಕಾರಿಗಳು ವರದಿ ಮಾಡಿದ್ದರು.

ಸದರಿ ಅಧಿನಿಯಮದ ಪ್ರಕರಣ 308–ಸಿ ಸದರಿ ಆದೇಶದ ಖಂಡ 6ರ ಉಪಖಂಡ (5)ರನ್ವಯ ದಿನಾಂಕ:08.05.2006ರಂದು ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸು ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರಿಗೆ ಜಾರಿಯಾಗಿದ್ದಾಗ್ಯೂ ಕೂಡ ಅವರು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳೂ ಸಹ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿದ್ದರು.

ಈ ರೀತಿ ಅಭ್ಯರ್ಥಿಯು ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ನೀಡದೇ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸಲು ವಿಫಲರಾಗಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಸದರಿ ಅಧಿನಿಯಮದ ಪ್ರಕರಣ 308–ಸಿ ರನ್ವಯ ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರನ್ನು ಆದೇಶ ಸಂಖ್ಯೆ: ರಾಚುಆ/01(21)/ ಟಿಜಡ್‌ಪಿ/2007, ಬೆಂಗಳೂರು ದಿನಾಂಕ:08.01.2008 ರಂತೆ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿತು.

ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರು ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ ರಿಟ್‌ಅರ್ಜಿ ಸಂಖ್ಯೆ:4383/2008 (ಎಲ್‌ಬಿ ಇಎಲ್‌ಇ) ಅನ್ನು ದಾಖಲಿಸಿ ಚುನಾವಣಾ ಆಯೋಗದ ಆದೇಶವನ್ನು ಪ್ರಶ್ನಿಸಿದ್ದರು. ಅವರು ತಮ್ಮ ರಿಟ್ ಅರ್ಜಿಯಲ್ಲಿ ತಾವು ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಸಂಬಂಧಿಸಿದ ಚುನಾವಣಾಧಿಕಾರಿಗಳಿಗೆ ನಿಗದಿತ ಅವಧಿಯೊಳಗೆ ಸಲ್ಲಿಸಿದ್ದಾಗ್ಯೂ ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಸಲ್ಲಿಸಿರುವುದಿಲ್ಲವೆಂದು ರಾಜ್ಯ ಚುನಾವಣಾ ಆಯೋಗವು ತಮ್ಮನ್ನು ಆರು

ವರ್ಷಗಳ ಅವಧಿಗೆ ಅನರ್ಹಗೊಳಿಸಿ ಆದೇಶ ಹೊರಡಿಸಿದ್ದು ಆಯೋಗದ ಸದರಿ ಆದೇಶ ಸಂಖ್ಯೆ ರಾಚುಆ/ 01(21)/ ಟಿಜಡ್‌ಪಿ/2007, ಬೆಂಗಳೂರು ದಿನಾಂಕ:08.01.2008 ಅನ್ನು ರದ್ದುಪಡಿಸಲು ಕೋರಿರುತ್ತಾರೆ.

ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ:25.06.2009 ರಲ್ಲಿ ಹೊರಡಿಸಿದ ಆದೇಶದಲ್ಲಿ ಆಯೋಗವು ಹೊರಡಿಸಿರುವ ಆದೇಶ ಸಂಖ್ಯೆ: ರಾಚುಆ/01/(21)/ಟಿಜಡ್‌ಪಿ/2007, ಬೆಂಗಳೂರು ದಿನಾಂಕ:08.01.2008 ಅನ್ನು ರದ್ದುಪಡಿಸಿ ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡಿ ಅವರು ಸಲ್ಲಿಸಿರುವ ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಪರಿಶೀಲಿಸಿ ಸೂಕ್ತ ಆದೇಶವನ್ನು ಹೊರಡಿಸಲು ಸೂಚಿಸಲಾಗಿರುತ್ತದೆ.

ಮಾನ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರು ಚುನಾವಣಾ ವೆಚ್ಚದ ಲೆಕ್ಕವಿವರಗಳನ್ನು ಸಲ್ಲಿಸಿರುವ ಬಗ್ಗೆ ಪರಿಶೀಲಿಸಿ ವಸ್ತುನಿಷ್ಠ ವರದಿಯನ್ನು ಆಯೋಗಕ್ಕೆ ಕಳುಹಿಸಿಕೊಡುವಂತೆ ಜಿಲ್ಲಾಧಿಕಾರಿಗಳು ಮೈಸೂರು ಜಿಲ್ಲೆರವರನ್ನು ಕೋರಲಾಗಿತ್ತು. ಜಿಲ್ಲಾಧಿಕಾರಿಗಳು ಈ ಬಗ್ಗೆ ಪರಿಶೀಲಿಸಿ ಪತ್ರಸಂಖ್ಯೆ ಇಎಲ್‌ಎನ್(2)11/2009–10 ದಿನಾಂಕ:19.08.2009 ರಂತೆ ಆಯೋಗಕ್ಕೆ ವರದಿಯನ್ನು ಕಳುಹಿಸಿರುತ್ತಾರೆ. ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಲಾಗಿ ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರು ಅವರ ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ದಿನಾಂಕ:25.01.2006 ರಂದು ಸಲ್ಲಿಸಿರುವುದಾಗಿ ಆ ಕ್ಷೇತ್ರದ ಚುನಾವಣಾಧಿಕಾರಿಗಳು ದಿನಾಂಕ:06.02.2006ರ ವರದಿಯಲ್ಲಿ ತಿಳಿಸಿದ್ದು, ನಂತರ ಚುನಾವಣಾಧಿಕಾರಿಗಳು ದಿನಾಂಕ:13.02.2006ರ ವರದಿಯಲ್ಲಿ ಈ ಕ್ಷೇತ್ರಕ್ಕೆ ನಾಗರಾಜು ಎಂಬ ಹೆಸರಿನ ಮೂರು ಅಭ್ಯರ್ಥಿಗಳು ಸ್ಪರ್ಧಿಸಿದ್ದರಿಂದ ಕೈತಪ್ಪಿನಿಂದಾಗಿ ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರು ಚುನಾವಣಾ ವೆಚ್ಚದ ಲೆಕ್ಕದ ವಿವರಗಳನ್ನು ಸಲ್ಲಿಸಿಲ್ಲವೆಂದು ತಿಳಿಸಲಾಗಿದ್ದು, ನಂತರ ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರು ಸಲ್ಲಿಸಿರುವ ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಮೈಸೂರು ತಾಲ್ಲೂಕು ಕಛೇರಿಗೆ ನೀಡಿರುವುದಾಗಿಯೂ ತಿಳಿಸಿರುತ್ತಾರೆ. ಅಲ್ಲದೆ ತಹಶೀಲ್ದಾರ್ ಮೈಸೂರು ತಾಲ್ಲೂಕು ಇವರು ಸಹ ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರು ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಸಲ್ಲಿಸಿರುವುದಾಗಿ ಮತ್ತು ವೆಚ್ಚಮಿತಿ ಮೀರಿರುವುದಿಲ್ಲವೆಂದು ವರದಿ ಮಾಡಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ವಿವರಿಸಿರುವ ಕಾರಣಗಳಿಂದ ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರು ಚುನಾವಣಾ ವೆಚ್ಚದ ಲೆಕ್ಕಪತ್ರಗಳನ್ನು ಸಲ್ಲಿಸಿರುವುದು ಸಾಬೀತಾಗಿರುವುದರಿಂದ ಅವರನ್ನು ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಅನರ್ಹಗೊಳಿಸಲು ಬರಲಾರದು. ಆದುದರಿಂದ ಆದೇಶ ಸಂಖ್ಯೆ: ರಾಚುಆ/01(21)/ ಟಿಜಡ್‌ಪಿ/2007, ಬೆಂಗಳೂರು ದಿನಾಂಕ:08.01.2008 ಪ್ರಾರಂಭದಿಂದಲೇ ಶೂನ್ಯವಾದ ಆದೇಶವಾಗಿರುತ್ತದೆ. ಆದುದರಿಂದ ಶ್ರೀ ಕೆ.ನಾಗರಾಜು ಬಿನ್ ಕೆಂಪೇಗೌಡ ರವರನ್ನು ಆದೇಶ ಸಂಖ್ಯೆ:ರಾಚುಆ/01(21)/ಟಿಜಡ್‌ಪಿ/2007, ಬೆಂಗಳೂರು ದಿನಾಂಕ:08.01.2008ರಲ್ಲಿ ಅನರ್ಹಗೊಳಿಸಿರುವ ಆದೇಶವನ್ನು ಈ ಮೂಲಕ ರದ್ಧುಪಡಿಸಲಾಗಿದೆ.

ಆಯುಕ್ತರು,
ರಾಜ್ಯ ಚುನಾವಣಾ ಆಯೋಗ.

ಪಿ.ಆರ್.915

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ, ಉಪವಿಭಾಗ–2, ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು–2, ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್–24/2009ಎಫ್, ದಿನಾಂಕ:14ನೇ ಸೆಪ್ಟೆಂಬರ್, 2009**

**ಅರ್ಜಿದಾರರು:**

1) ಆಯಿಷಾ ಗಂಡ ಝುಕಾರಿಯ, ಪ್ರಾಯ 19 ವರ್ಷ.
2) ಉಮರ್ ಕೆ. ತಂದೆ ಅಬ್ದುಲ್ ಖಾದರ್, ಪ್ರಾಯ:58 ವರ್ಷ.
3) ಸಾರಮ್ಮ ಗಂಡ ಉಮರ್ ಕೆ. ಪ್ರಾಯ:47 ವರ್ಷ.
4) ಅಮೀನಬಾನು ತಂದೆ ಉಮರ್ ಕೆ. ಪ್ರಾಯ: 18 ವರ್ಷ, ವಾಸ:ಶಾಂತಿಬೆಟ್ಟುಮನೆ, ಕಾಕ್ರಾಡಿ ಗ್ರಾಮ, ಪುತ್ತೂರು ತಾಲ್ಲೂಕು.

**ಪ್ರತಿವಾದಿಗಳು:**

1) ಎ. ಅಶ್ರಫ್, ತಂದೆ: ಉಮ್ಮರ್ ಹಾಜಿ, ವಾಸ: ಶಾಂತಿ ಬೆಟ್ಟುಮನೆ, ನೆಲ್ಲಾಡಿ ಅಂಚೆ, ಕಾಕ್ರಾಡಿ ಗ್ರಾಮ, ಪುತ್ತೂರು ತಾಲ್ಲೂಕು.
2) ಶಾಖಾಧಿಕಾರಿ, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ, ಪೋರ್ಟ್ ಬಿಲ್ಡಿಂಗ್ ಮುಖ್ಯರಸ್ತೆ, ಪುತ್ತೂರು ತಾಲ್ಲೂಕು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಆಯಿಷಾ ಇವರು ತಮ್ಮ ಗಂಡನಾದ ಶ್ರೀ ಝುಕಾರಿಯ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:14.07.2009ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ
ಉಪವಿಭಾಗ-2, ಮಂಗಳೂರು.

ಪಿ.ಆರ್.923

**ಆಯುಕ್ತರ ಕಛೇರಿ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಸಿಎಫ್‌ಎಸ್:ಪಿಡಿ:ಪಿಟಿಎಲ್:9/2002-03, ಬೆಂಗಳೂರು, ದಿನಾಂಕ:10ನೇ ಸೆಪ್ಟೆಂಬರ್, 2009**

**ವಿಷಯ:** ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶಕ್ಕೆ ವಿತರಿಸಲಾಗುವ ಸೀಮೆಎಣ್ಣೆಯ ಪರಿಷ್ಕೃತ ದರಪಟ್ಟಿಯನ್ನು ಜಾರಿಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆಯ ದಿನಾಂಕ:05.10.2007ರ ಅಧಿಸೂಚನೆ.

2) ಕೇಂದ್ರ ಸರ್ಕಾರದ ಪೆಟ್ರೋಲಿಯಂ ಮತ್ತು ನೈಸರ್ಗಿಕ ಅನಿಲ ಮಂತ್ರಾಲಯದ ಪತ್ರ ಸಂಖ್ಯೆ:ಪಿ-20028/2/2000-ಪಿಪಿ(VOI-III), ದಿನಾಂಕ:23.05.2008 ಮತ್ತು ಪಿ:20028/2/2000-ಪಿಪಿ(VOI-IV) ದಿನಾಂಕ:06.07.2009.

3) ಸರ್ಕಾರದ ಪತ್ರ ಸಂಖ್ಯೆ: ಆನಾಸ 58 ಎಫ್‌ಪಿಪಿ/2009, ದಿನಾಂಕ:03.08.2009.

4) ಈ ಕಛೇರಿಯ ಸಮ ಸಂಖ್ಯೆಯ ಅಧಿಸೂಚನೆ ದಿನಾಂಕ:31.08.2009.

ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖ (4)ರ ಅಧಿಸೂಚನೆಯಲ್ಲಿ ಸೀಮೆಎಣ್ಣೆಯ ಪರಿಷ್ಕೃತ ದರಪಟ್ಟಿಯನ್ನು ದಿನಾಂಕ:01.09.2009 ರಿಂದ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಗಿತ್ತು. ಪ್ರಸ್ತುತ ಸರ್ಕಾರವು ಸೇವಾ ತೆರಿಗೆಯನ್ನು ರದ್ದುಪಡಿಸಿದ ಹಿನ್ನೆಲೆಯಲ್ಲಿ ಸೀಮೆಎಣ್ಣೆಯ ದರಪಟ್ಟಿಯನ್ನು ಪರಿಷ್ಕರಿಸಬೇಕಾಗಿದ್ದು ದಿನಾಂಕ:01.09.2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಪರಿಷ್ಕರಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಹೆಚ್.ಆರ್.ಶ್ರೀನಿವಾಸ, ಭಾ.ಆ.ಸೇ. ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಆದ ನಾನು ಸೀಮೆಎಣ್ಣೆ (ಉಪಯೋಗದ ಮೇಲಿನ ನಿರ್ಬಂಧ ಮತ್ತು ದರ ನಿಗದಿ) ಆದೇಶ 1993 ರ ಉಪಬಂಧಗಳಡಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್‌ಸಿಎಲ್ 172 ಎಫ್‌ಸಿಎಸ್ 70 ಎಸ್.ಓ.2243, ದಿನಾಂಕ:23.10.1970ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಾರ್ವಜನಿಕ ವಿತರಣಾ ಪದ್ಧತಿಯ ಸೀಮೆಎಣ್ಣೆಯ ಗರಿಷ್ಠ ಮಾರಾಟ ದರವನ್ನು ಪರಿಷ್ಕರಿಸಿ ದರಪಟ್ಟಿಯನ್ನು ಸಿದ್ಧಪಡಿಸಿದ್ದು, ಅನುಬಂಧದಲ್ಲಿರುವ ಸದರಿ ದರಪಟ್ಟಿಯನ್ನು ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶಕ್ಕೆ ಸಂಬಂಧಿಸಿದಂತೆ ದಿನಾಂಕ:01.09.2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಈ ಮೂಲಕ ಆದೇಶಿಸಿದೆ.

**ಹೆಚ್.ಆರ್. ಶ್ರೀನಿವಾಸ**
ಆಯುಕ್ತರು,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ
ವ್ಯವಹಾರಗಳ ಇಲಾಖೆ, ಬೆಂಗಳೂರು.

**ಅನುಬಂಧ**

**ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶಕ್ಕೆ ಸಂಬಂಧಿಸಿದಂತೆ ಪರಿಷ್ಕೃತ ಸೀಮೆಎಣ್ಣೆ ದರಪಟ್ಟಿ, ದಿನಾಂಕ:01.09.2009 ರಿಂದ ಜಾರಿಗೆ ಬರುವಂತೆ**

| ಕ್ರ. ಸಂ. | ವಿವರಗಳು | ದೂರ 130 ಕಿ.ಮೀ. (ದರಪ್ರತಿ ಕೆ.ಎಲ್.ಗೆ) |
|---|---|---|
| 1. | ಎಕ್ಸ್‌ಟರ್ಮಿನಲ್‌ದರ | 8241.90 |
| 2. | ವ್ಯಾಟ್ ತೆರಿಗೆ @ 4% | 329.68 |
| 3. | ಟರ್ಮಿನಲ್ ವಿತರಣಾ ದರ | 8571.58 |

| | | |
|---|---|---|
| 4. | ಆಯಿಲ್ ಕಂಪನಿಗೆ ನೀಡಬೇಕಾದ ಸಾಗಾಣಿಕೆ ದರ | 167.39 |
| 5. | ಆಯಿಲ್ ಕಂಪನಿಗೆ ಪಾವತಿಸಬೇಕಾದ ಮೊತ್ತ | 8738.97 |
| 6. | ಸಗಟು ವಹಿವಾಟುದಾರರ ಕಮೀಷನ್ | 263.00 |
| 7. | ನ್ಯಾಯಬೆಲೆ ಅಂಗಡಿಗೆ ಸೀಮೆಎಣ್ಣೆ ವಿತರಿಸುವ ಸಾಗಾಣಿಕೆ ದರ | 0 |
| 8. | ಸುಮೌಲ್ಯ ತೆರಿಗೆ @4% (ಸಗಟು ಲಾಭಾಂಶ) | 10.52 |
| 9. | ಸಗಟು ಬೆಲೆ | 9012.49 |
| 10. | ಸರ್ಕಾರಕ್ಕೆ ಪಾವತಿಸಬೇಕಾದ ವ್ಯತ್ಯಾಸದ ದರ ಪ್ರತಿ ಕೆ.ಎಲ್.ಗೆ | 75.51 |
| 11. | ಸಗಟು ವಿತರಣಾ ಬೆಲೆ ಪ್ರತಿ ಕೆ.ಎಲ್.ಗೆ | 9088.00 |
| 12. | ಚಿಲ್ಲರೆ ಮಾರಾಟಗಾರರ ಕಮೀಷನ್ ಪ್ರತಿ ಕೆ.ಎಲ್.ಗೆ | 300.00 |
| 13. | ಸುಮೌಲ್ಯ ತೆರಿಗೆ:@4% (ಚಿಲ್ಲರೆ ಲಾಭಾಂಶ) | 12.00 |
| 14. | ಚಿಲ್ಲರೆ ಮಾರಾಟ ದರ ಪ್ರತಿ ಕೆ.ಎಲ್.ಗೆ | 9400.00 |
| 15. | ಚಿಲ್ಲರೆ ಮಾರಾಟ ದರ ಪ್ರತಿ ಲೀಟರ್‌ಗೆ | 9.40 |

ಆಯುಕ್ತರ ಪರವಾಗಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು.

ಪಿ.ಆರ್.925

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆಜಿಲ್ಲೆ, ಆಂಜನೇಯ ದೇವಸ್ಥಾನ ಎದುರು, ವಿದ್ಯಾನಗರ, ದಾವಣಗೆರೆ ಇವರ ಕಛೇರಿಯ ನಡವಳಿಗಳು

**ವಿಷಯ:** ಸಮಾಪನೆಗೊಂಡಿರುವ ಅಷ್ಟಲಕ್ಷ್ಮಿ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಹರಿಹರ ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್–10/2006–07, ದಿನಾಂಕ:16.11.2006.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಪತ್ರ ದಿನಾಂಕ:28.08.2009.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್–31/ಆರ್‌ಜಿಎನ್/29156/02–03, ದಿನಾಂಕ:20.06.2002 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ದಿನಾಂಕ:16.11.2006 ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ:ನೋಸಂರ/ಸಿಆರ್–10/2006–07, ದಿನಾಂಕ:14ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಬಿ.ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಅಷ್ಟಲಕ್ಷ್ಮಿ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಹರಿಹರ ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:14.09.2009ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಬಿ. ಕುಬೇರಪ್ಪ**

ಪಿ.ಆರ್.926

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–II, ವಿಜಾಪುರ ಜಿಲ್ಲೆ, ವಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಸ್‌ಆರ್–121/09, ದಿನಾಂಕ:8ನೇ ಸೆಪ್ಟೆಂಬರ್, 2009**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಮಹಾದೇವಿ ಗಂಡ ಯಲ್ಲಪ್ಪ ಕಾಂಬ್ಳೆ ಉರ್ಫ್ ದೊಡಮನಿ, ಸಾ:ಯತ್ನಾಳ, ತಾ:ಜಿ:ವಿಜಾಪುರ, ಮತ್ತು ಇತರರು. | 1) ಶ್ರೀ ಎಸ್.ಎಸ್. ಉಪ್ಪಾರ ಅಂಡ್ ಕಂ. ಉಪ ಗುತ್ತಿಗೆದಾರರ ಹಿಂಡಲ್ಕೊ ಇಂಡಸ್ಟ್ರೀಸ್ ಲಿ., ಬೆಳಗಾಂವ ವರ್ಕ್ಸ್, ಪೋಸ್ಟ್ ಬಾಕ್ಸ್ ನಂ.1, ಬೆಳಗಾಂವ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಯಲ್ಲಪ್ಪ ಲಕ್ಷ್ಮಣ ಕಾಂಬ್ಳೆ ಉರ್ಫ್ ದೊಡಮನಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:27.02.2007 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರ, ಉಪವಿಭಾಗ–II,
ವಿಜಾಪುರ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–II, ವಿಜಾಪುರ ಜಿಲ್ಲೆ, ವಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಸ್‌ಆರ್–123/09, ದಿನಾಂಕ:11ನೇ ಸೆಪ್ಟೆಂಬರ್, 2009**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಜಯಶ್ರೀ ತಂದೆ ಸಂಜೇಯ ಸ್ವಾಮಿ ಉರ್ಫ್ ಹಿರೇಮಠ ಮತ್ತು ಇತರರು, ಸಾ: ಕಾಸೀಮಕರಿ ತಾಂಡಾ ಆದರ್ಶನಗರದ ಹತ್ತಿರ, ಬಿಜಾಪುರ. | 1) ಶ್ರೀ ರವಿಕುಮಾರ ಚವಾಣ ತಂದೆ ವಿ.ಜಿ. ಚವಾಣ ಸಾ: ಹುಬ್ಬಳ್ಳಿ, ಹಾಲಿ ಆರ್.ವಿ. ಚವಾಣ ಕೇರಾಫ್ ಸೋಮಶೇಖರ ಎಸ್. ಚವಾಣ ಪ್ಲಾಟ, ನಂ.97, 5ನೇ ಬ್ಲಾಕ್, ಬಳ್ಳಾರಿ.<br>2) ಮ್ಯಾನೇಜರ್, ದಿ ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಬಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಸಂಜೇಯ ಶಿವಪಾದಯ್ಯಸ್ವಾಮಿ ಉರ್ಫ್ ಹಿರೇಮಠ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:01.09.2009 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರ, ಉಪವಿಭಾಗ–II,
ವಿಜಾಪುರ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–II, ವಿಜಾಪುರ ಜಿಲ್ಲೆ, ವಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಸ್‌ಆರ್–124/09, ದಿನಾಂಕ:10ನೇ ಸೆಪ್ಟೆಂಬರ್, 2009**

**ಅರ್ಜಿದಾರರು**

ಶ್ರೀ ರಸೂಲಸಾಬ ತಂದೆ ನಬಿಸಾಬ ಆವಟಿ ಮತ್ತು ಇತರರು, ಸಾ: ಬಸರಕೋಡ, ತಾ: ಮುದ್ದೇಬಿಹಾಳ, ಜಿಲ್ಲೆ; ಬಿಜಾಪುರ.

**ಪ್ರತಿವಾದಿಗಳು**

1) ತೋಫಿಕಅಹ್ಮದ ತಂದೆ ಅಬ್ದುಲ್‌ಸಾಬ ಮುಲ್ಲಾ ಸಾ: ವಿದ್ಯಾನಗರ, ಕುಡಚಿ ರೋಡ್, ರಬಕವಿ, ತಾ: ಜಮಖಂಡಿ, ಜಿ:ಬಾಗಲಕೋಟೆ.

2) ದಿ ಬ್ರ್ಯಾಂಚ್ ಮ್ಯಾನೇಜರ್, ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ನಬಿಲಾಲ ಆವಟಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:06.11.2008 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ
ಪಿ.ಆರ್.929 ಪರಿಹಾರ ಆಯುಕ್ತರ, ಉಪವಿಭಾಗ–II,
ವಿಜಾಪುರ.

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಕೊಪ್ಪಳ ಜಿಲ್ಲೆ, ಕೊಪ್ಪಳ**

**ಪ್ರಕಟಣೆ ಸಂಖ್ಯೆ: ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ:68:2009, ದಿನಾಂಕ:15ನೇ ಸೆಪ್ಟೆಂಬರ್, 2009**

**ಅರ್ಜಿದಾರರು**

1) ಪಾರ್ವತಮ್ಮ ಗಂಡ ದುರುಗಪ್ಪ.
2) ದುರುಗಮ್ಮ ತಂದೆ ದುರುಗಪ್ಪ
3) ವೆಂಕಟೇಶ್ ತಂದೆ ದುರುಗಪ್ಪ
4) ಹನ್ಮಂತ ತಂದೆ ದುರುಗಪ್ಪ
5) ಸುರೇಶ್ ತಂದೆ ದುರುಗಪ್ಪ
ಎಲ್ಲಾ ಅರ್ಜಿದಾರರ ವಾಸ: ವೆಂಕಟಾಪುರ.

**ಪ್ರತಿವಾದಿಗಳು**

1) ಬಿ. ವೆಂಕಟರೆಡ್ಡಿ ತಂದೆ ರವಿ ರೆಡ್ಡಿ, ಗುತ್ತಿಗೆದಾರರು, ಜುಬಲಿ ಹಿಲ್ಸ್, ಹೈದರಾಬಾದ್.

2) ಎಕ್ಸಿಕ್ಯೂಟಿವ್ ಇಂಜನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ (ಪಿ.ಡಬ್ಲ್ಯೂ.ಡಿ.) ಕೊಪ್ಪಳ.

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ/ಶ್ರೀಮತಿ ದುರ್ಗೇಶ್ ತಂದೆ ದುರುಗಪ್ಪ (ದುರ್ಗೇಶ್ ತಂದೆ ದುರುಗಪ್ಪ) ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.09.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ದುರ್ಗೇಶ್ ಇವರ ವಾರಸುದಾರರಾದ ಶ್ರೀ/ಶ್ರೀಮತಿ (1) ಪಾರ್ವತಮ್ಮ (2) ದುರಗಮ್ಮ (3) ವೆಂಕಟೇಶ (4) ಸುರೇಶ (5) ಹನ್ಮಂತ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಕೊಪ್ಪಳ ಜಿಲ್ಲೆ, ಕೊಪ್ಪಳ**
**ಪ್ರಕಟಣೆ ಸಂಖ್ಯೆ: ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ:69:2009, ದಿನಾಂಕ:15ನೇ ಸೆಪ್ಟೆಂಬರ್, 2009**

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1) ಅನಸೂಯಮ್ಮ ಗಂಡ: ಗಾದಿಲಿಂಗಪ್ಪ<br>2) ಕೃಷ್ಣಪ್ಪ ತಂದೆ ಗಾದಿಲಿಂಗಪ್ಪ<br>3) ಪರಮೇಶ ತಂದೆ ಗಾದಿಲಿಂಗಪ್ಪ<br>ಎಲ್ಲಾ ಅರ್ಜಿದಾರರ ವಾಸ: ವೆಂಕಟಾಪುರ. | 1) ಬಿ. ವೆಂಕಟರೆಡ್ಡಿ ತಂದೆ ರವಿ ರೆಡ್ಡಿ, ಗುತ್ತಿಗೆದಾರರು, ಜುಬಲಿ ಹಿಲ್ಸ್, ಹೈದರಾಬಾದ್.<br>2) ಎಕ್ಸಿಕ್ಯೂಟಿವ್ ಇಂಜನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ (ಪಿ.ಡಬ್ಲ್ಯೂ.ಡಿ.) ಕೊಪ್ಪಳ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ/ಶ್ರೀಮತಿ ಗಾದಿಲಿಂಗಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.01.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಗಾದಿಲಿಂಗಪ್ಪ ಇವರ ವಾರಸುದಾರರಾದ ಶ್ರೀ/ಶ್ರೀಮತಿ (1) ಅನಸೂಯಮ್ಮ (2) ಕೃಷ್ಣಪ್ಪ (3) ಪರಮೇಶ, ವೆಂಕಟಾಪುರ ಗ್ರಾಮ, ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಕೊಪ್ಪಳ ಜಿಲ್ಲೆ, ಕೊಪ್ಪಳ**
**ಪ್ರಕಟಣೆ ಸಂಖ್ಯೆ: ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ:70:2009, ದಿನಾಂಕ:15ನೇ ಸೆಪ್ಟೆಂಬರ್, 2009**

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1) ಶ್ರೀಮತಿ ಯಮನಮ್ಮ ಗಂಡ ಭೀಮಪ್ಪ<br>2) ಲಲಿತಾ ತಂದೆ ಭೀಮಪ್ಪ, ಅರ್ಜಿದಾರರ ವಾಸ: ಸಾ: ಆನೆಗುಂದಿ, ತಾ: ಗಂಗಾವತಿ. | 1) ಬಿ. ವೆಂಕಟರೆಡ್ಡಿ ತಂದೆ ರವಿ ರೆಡ್ಡಿ, ಗುತ್ತಿಗೆದಾರರು, ಜುಬಲಿ ಹಿಲ್ಸ್, ಹೈದರಾಬಾದ್.<br>2) ಎಕ್ಸಿಕ್ಯೂಟಿವ್ ಇಂಜನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ (ಪಿ.ಡಬ್ಲ್ಯೂ.ಡಿ.) ಕೊಪ್ಪಳ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ/ಶ್ರೀಮತಿ ಭೀಮಪ್ಪ ತಂದೆ ನಿಂಗಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.01.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಭೀಮಪ್ಪ ಇವರ ವಾರಸುದಾರರಾದ ಶ್ರೀ/ಶ್ರೀಮತಿ ಯಮನಮ್ಮ ಗಂಡ ಭೀಮಪ್ಪ ಮತ್ತು ಲಲಿತಾ ತಂದೆ ಭೀಮಪ್ಪ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಕೊಪ್ಪಳ ಜಿಲ್ಲೆ, ಕೊಪ್ಪಳ**
**ಪ್ರಕಟಣೆ ಸಂಖ್ಯೆ: ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ:71:2009, ದಿನಾಂಕ:15ನೇ ಸೆಪ್ಟೆಂಬರ್, 2009**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| 1) ಅಶಾಬನಿ ಗಂಡ ರಸೂಲ್‌ಸಾಬ್<br>2) ಖಾಜಾವಬನಿ ತಂದೆ ರಸೂಲ್‌ಸಾಬ್<br>3) ರಾಜಾ ಹುಸೇನ್ ತಂದೆ ರಸೂಲ್‌ಸಾಬ್<br>4) ಸದ್ದಾಂ ಹುಸೇನ್ ತಂದೆ ರಸೂಲ್‌ಸಾಬ್<br>ಅರ್ಜಿದಾರರು ಎಲ್ಲಾರು ವಾಸ: ಆನೆಗೊಂದಿ ತಾ: ಗಂಗಾವತಿ. | 1) ಬಿ. ವೆಂಕಟರೆಡ್ಡಿ ತಂದೆ ರವಿ ರೆಡ್ಡಿ, ಗುತ್ತಿಗೆದಾರರು, ಜುಬಲಿ ಹಿಲ್ಸ್, ಹೈದರಾಬಾದ್.<br>2) ಎಕ್ಸಿಕ್ಯೂಟಿವ್ ಇಂಜನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ (ಪಿ.ಡಬ್ಲ್ಯೂ.ಡಿ.) ಕೊಪ್ಪಳ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ/ಶ್ರೀಮತಿ ರಸೂಲ್‌ಸಾಬ್ ತಂದೆ ರಾಜಾಸಾಬ್ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.01.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ರಸೂಲ್‌ಸಾಬ್ ಇವರ ವಾರಸುದಾರರಾದ ಶ್ರೀ/ಶ್ರೀಮತಿ (1) ಅಶಾಬನಿ, (2) ಖಾಜಾವಬನಿ (3) ರಾಜಾಹುಸೇನ್ (4) ಸದ್ದಾಂ ಹುಸೇನ್ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್.930

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಕೊಪ್ಪಳ ಜಿಲ್ಲೆ, ಕೊಪ್ಪಳ**
**ಪ್ರಕಟಣೆ ಸಂಖ್ಯೆ: ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ:72:2009, ದಿನಾಂಕ:15ನೇ ಸೆಪ್ಟೆಂಬರ್, 2009**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| 1) ಶ್ರೀಮತಿ ರಾಘಮ್ಮ ಗಂಡ ಭರತ್‌ರಾಜ್<br>2) ಆಶಿಶ್ ರಾಜವರ್ಧನ್ ತಂದೆ ಭರತ್‌ರಾಜ್<br>3) ಧನ್ಯರಾಣಿ ತಂದೆ ಭರತ್‌ರಾಜ್<br>ಅರ್ಜಿದಾರರ ವಾಸ: ಆನೆಗೊಂದಿ ಗ್ರಾಮ ತಾ: ಗಂಗಾವತಿ. | 1) ಬಿ. ವೆಂಕಟರೆಡ್ಡಿ ತಂದೆ ರವಿ ರೆಡ್ಡಿ, ಗುತ್ತಿಗೆದಾರರು, ಜುಬಲಿ ಹಿಲ್ಸ್, ಹೈದರಾಬಾದ್.<br>2) ಎಕ್ಸಿಕ್ಯೂಟಿವ್ ಇಂಜನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ (ಪಿ.ಡಬ್ಲ್ಯೂ.ಡಿ.) ಕೊಪ್ಪಳ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ/ಶ್ರೀಮತಿ ಭರತ್‌ರಾಜ್ ತಂದೆ ನೀಲಂಸಿಂಗ್ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.01.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಭರತ್‌ರಾಜ್ ಇವರ ವಾರಸುದಾರರಾದ ಶ್ರೀ/ಶ್ರೀಮತಿ (1) ರಾಘಮ್ಮ (2) ಆಶಿಶ್ ರಾಜವರ್ಧನ್ (3) ಧನ್ಯರಾಣಿ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಕೊಪ್ಪಳ ಜಿಲ್ಲೆ, ಕೊಪ್ಪಳ**
**ಪ್ರಕಟಣೆ ಸಂಖ್ಯೆ: ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ:73:2009, ದಿನಾಂಕ:15ನೇ ಸೆಪ್ಟೆಂಬರ್, 2009**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| 1) ಶ್ರೀಮತಿ ಈರಮ್ಮ ಗಂಡ ಧರ್ಮಣ್ಣ<br>2) ಕೆಂಚಮ್ಮ ತಂದೆ ಧರ್ಮಣ್ಣ<br>3) ರಾಜಾ ತಂದೆ ಧರ್ಮಣ್ಣ<br>ಅರ್ಜಿದಾರರ ವಾಸ: ಆನೆಗೊಂದಿ ಗ್ರಾಮ ತಾ: ಗಂಗಾವತಿ. | 1) ಬಿ. ವೆಂಕಟರೆಡ್ಡಿ ತಂದೆ ರವಿ ರೆಡ್ಡಿ, ಗುತ್ತಿಗೆದಾರರು, ಜುಬಲಿ ಹಿಲ್ಸ್, ಹೈದರಾಬಾದ್.<br>2) ಎಕ್ಸಿಕ್ಯೂಟಿವ್ ಇಂಜನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ (ಪಿ.ಡಬ್ಲ್ಯೂ.ಡಿ.) ಕೊಪ್ಪಳ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ/ಶ್ರೀಮತಿ ಧರ್ಮಣ್ಣ ತಂದೆ ಡಿ. ತಿಮ್ಮಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.01.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಕೇಳಿಕೊಂಡು ಮೃತ ಧರ್ಮಣ್ಣ ಇವರ ವಾರಸುದಾರರಾದ ಶ್ರೀ/ಶ್ರೀಮತಿ (1) ಈರಮ್ಮ (2) ಕೆಂಚಮ್ಮ (3) ರಾಜಾ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಕೊಪ್ಪಳ ಜಿಲ್ಲೆ, ಕೊಪ್ಪಳ**
**ಪ್ರಕಟಣೆ ಸಂಖ್ಯೆ: ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ:75:2009, ದಿನಾಂಕ:15ನೇ ಸೆಪ್ಟೆಂಬರ್, 2009**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಮಲ್ಲಮ್ಮ ಗಂಡ ಸೋಮಪ್ಪ ಮನೆ ಕೆಲಸ, ಸಾ: ವೆಂಕಟಾಪುರ. | 1) ಬಿ. ವೆಂಕಟರೆಡ್ಡಿ ತಂದೆ ರವಿ ರೆಡ್ಡಿ, ಗುತ್ತಿಗೆದಾರರು, ಜುಬಲಿ ಹಿಲ್ಸ್, ಹೈದರಾಬಾದ್.<br>2) ಎಕ್ಸಿಕ್ಯೂಟಿವ್ ಇಂಜನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ (ಪಿ.ಡಬ್ಲ್ಯೂ.ಡಿ.) ಕೊಪ್ಪಳ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ/ಶ್ರೀಮತಿ ಹುಲುಗೇಶ್ ತಂದೆ ಸೋಮಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.01.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಹುಲುಗೇಶ್ ಇವರ ವಾರಸುದಾರರಾದ ಶ್ರೀ/ಶ್ರೀಮತಿ ಮಲ್ಲಮ್ಮ ಗಂಡ ಸೋಮಪ್ಪ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ಕೊಪ್ಪಳ ಜಿಲ್ಲೆ, ಕೊಪ್ಪಳ**
**ಪ್ರಕಟಣೆ ಸಂಖ್ಯೆ: ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ:117:2009, ದಿನಾಂಕ:8ನೇ ಸೆಪ್ಟೆಂಬರ್, 2009**

**ಅರ್ಜಿದಾರರು**

1) ಹನುಮಂತಪ್ಪ ತಂದೆ ವೆಂಕಪ್ಪ
2) ಶ್ರೀಮತಿ ಲಕ್ಷ್ಮಮ್ಮ @ ಲಕ್ಷ್ಮಿದೇವಿ W/o ಹನುಮಂತಪ್ಪ.
ಅರ್ಜಿದಾರರ ವಾಸ: ಮುದ್ದಲಗುಂದಿ, ತಾ:ಕುಷ್ಟಗಿ.

**ಪ್ರತಿವಾದಿಗಳು**

1) ಸಂತೋಷ ಎಂ.ಎಸ್. ತಂದೆ ಎಂ.ಆರ್. ಮಲ್ಲಯ್ಯ ಲಾರಿ ಮಾಲೀಕರು, ಬೆಂಗಳೂರು–02.
2) ದಿ ಜನರಲ್ ಮ್ಯಾನೇಜರ್ ಮೆ: ರಾಯಲ್ ಸುಂದರಂ ಅಲಾಯನ್ಸ್ ಇನ್ಸೂರೆನ್ಸ್ ಕಂ.ಲಿ., ಬೆಂಗಳೂರು.

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ/ಶ್ರೀಮತಿ ರವಿ ತಂದೆ ಹನುಮಂತಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:30.06.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ರವಿ ಇವರ ವಾರಸುದಾರರಾದ ಶ್ರೀ/ಶ್ರೀಮತಿ ಹನುಮಂತಪ್ಪ ಮತ್ತು ಲಕ್ಷ್ಮೀದೇವಿ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್.931

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ**
**ಪ್ರಕರಣ ಸಂಖ್ಯೆ: 236:09:ಎಫ್:706–07, ದಿನಾಂಕ:10ನೇ ಸೆಪ್ಟೆಂಬರ್, 2009**

**ಅರ್ಜಿದಾರರು**

1) ಸಣ್ಣ ರಾಮಾನಾಯ್ಕ್ ತಂದೆ: ಲೇಟ್ ಶಂಕರ ನಾಯ್ಕ್, ವಯಸ್ಸು: 45 ವರ್ಷ, ವೃತ್ತಿ, ಕೂಲಿ (ಮೃತನ ತಂದೆ)
2) ಶ್ರೀಮತಿ ಸೋನಾಬಾಯಿ ಗಂ: ಸಣ್ಣ ರಾಮನಾಯ್ಕ್, ವಯಸ್ಸು:40 ವರ್ಷ, ವೃತ್ತಿ: ಮನೆಕೆಲಸ (ಮೃತನ ತಾಯಿ)
ಎಲ್ಲರ ವಾಸ: ಬಿ. ಬೆಳಗಲ್ ತಾಂಡ, ಬೆಳಗಲ್‌ಪೋಸ್ಟ್, ಬಳ್ಳಾರಿ (ತಾ) (ಜಿ).

**ವಿರುದ್ಧ**

**ಪ್ರತಿವಾದಿಗಳು**

1) ಕೃಷ್ಣಾ ನಾಯ್ಕ್ ತಂ: ಮೇಗ್ಯಾನಾಯ್ಕ್, ವಯಸ್ಸು: 35 ವರ್ಷ, ವಾಹನ ಸಂಖ್ಯೆ: ಕೆಎ–34:9568ರ ಮಾಲೀಕರು, ಬೆಳಗಲ್ ತಾಂಡ, ಪೋ:ಬೆಳಗಲ್, ಬಳ್ಳಾರಿ ಜಿಲ್ಲೆ.
2) ಮೆ: ಡಿವಿಜನಲ್ ಮ್ಯಾನೇಜರ್ ಮೆ: ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ.

**ಪ್ರಕಟಣೆ**

ಸಣ್ಣ ರಾಮಾನಾಯ್ಕ್ ಮತ್ತು ಶ್ರೀಮತಿ ಸೊನಾಬಾಯಿಯವರು ಮೃತ ಸೋಮಶೇಖರ್ ನಾಯ್ಕನ ತಂದೆ–ತಾಯಿ ಹಾಗೂ ಶಾಸನಬದ್ಧ ವಾರಸುದಾರರೆಂದು, ದಿನಾಂಕ:31.07.2008ರಂದು ಮೃತನು ಕರ್ತವ್ಯದ ಮೇಲಿದ್ದಾಗ ಅಪಘಾತ ಸಂಭವಿಸಿ ತೀವ್ರಗಾಯಗೊಂಡು ಚಿಕಿತ್ಸೆ ಪಡೆಯುತ್ತಿದ್ದಾಗ ಫಲಕಾರಿಯಾಗದೆ ಮೃತಪಟ್ಟಿರುತ್ತಾನೆಂದು ತಿಳಿಸಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯಕ್ಕೆ ದಾವಾ ಅರ್ಜಿ ಹಾಕಿ ಕೋರಿರುತ್ತಾರೆ.

ಈ ಸಂಬಂಧವಾಗಿ ಸಾರ್ವಜನಿಕರಿಗೆ ಹಾಗೂ ಸಂಬಂಧಿಕರಿಗೆ ಬೇರೆ ಯಾರಾದರೂ ವಾರಸುದಾರರೆಂದು ಪರಿಗಣಿಸಬೇಕೆಂದು ಕೋರಿದಲ್ಲಿ ಅಂಥಹವರು ಈ ಪ್ರಕಟಣೆಗೊಂಡ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಆಕ್ಷೇಪಣೆಗಳನ್ನು ಸಲ್ಲಿಸತಕ್ಕದ್ದು, ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕಾಧಿಕಾರಿ ಮತ್ತು
ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ**
**ಪ್ರಕರಣ ಸಂಖ್ಯೆ:ಕಾನಪ: 237:09:ಎಫ್:708–09, ದಿನಾಂಕ:10ನೇ ಸೆಪ್ಟೆಂಬರ್, 2009**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ಜಯಬಾಯಿ ಗಂಡ: ಚಂದ್ರನಾಯ್ಕ್ ವಯಸು:35 ವರ್ಷ, ವೃತ್ತಿ, ಮನೆಕೆಲಸ (ಮೃತನ ಹೆಂಡತಿ), 2) ತೋಪ್ಯಾನಾಯ್ಕ್, ತಂ: ನಾಯ್ಕ್ ವಯಸ್ಸು: 60 ವರ್ಷ, ವೃತ್ತಿ ಏನೂ ಇಲ್ಲ. ವಾಸ: ಬೆಳಗಲ್ ತಾಂಡ ಗ್ರಾಮ, ಬಳ್ಳಾರಿ (ತಾ) (ಜಿ). | **ವಿರುದ್ಧ** | 1) ದಿ ಡಿವಿಜನಲ್ ಮ್ಯಾನೇಜರ್, ಕೆ.ಎಸ್.ಆರ್.ಟಿ.ಸಿ. ಬಳ್ಳಾರಿ. |

**ಪ್ರಕಟಣೆ**

ಶ್ರೀಮತಿ ಜಯಬಾಯಿ ಗಂ: ಚಂದ್ರನಾಯ್ಕ್ ಮತ್ತು ತೋಪ್ಯಾನಾಯ್ಕರು ಮೃತನ ಹೆಂಡತಿ ಹಾಗೂ ತಂದೆಯಾಗಬೇಕೆಂದು ಮತ್ತು ಶಾಸನಬದ್ಧ ವಾರಸುದಾರರೆಂದು ತಿಳಿಸಿ ಮೃತ ಚಂದ್ರನಾಯ್ಕ್‌ನು ದಿನಾಂಕ:27.04.2009ರಂದು ಕರ್ತವ್ಯದ ಮೇಲಿದ್ದಾಗ ಹಾರ್ಟ್‌ಅಟ್ಯಾಕ್ ಆಗಿ ಚಿಕಿತ್ಸೆ ಪಡೆಯುತ್ತಿದ್ದಾಗ ಫಲಕಾರಿಯಾಗದೆ ವಿಮ್ಸ್ ಆಸ್ಪತ್ರೆಯಲ್ಲಿ ಮರಣಹೊಂದಿರುತ್ತಾರೆಂದು ತಿಳಿಸಿ ನಷ್ಟ ಪರಿಹಾರಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ಸಂಬಂಧವಾಗಿ ಬೇರೆಯಾರಾದರೂ ಅಥವಾ ಸಂಬಂಧೀಕರು ವಾರಸುದಾರರೆಂದು ಪರಿಗಣಿಸಬೇಕೆಂದಲ್ಲಿ ಅಂಥಹವರು ಈ ಪ್ರಕಟಣೆ ಪ್ರಕಟವಾದ 30 ದಿನಗಳೊಳಗಾಗಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸತಕ್ಕದ್ದು. ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕಾಧಿಕಾರಿ ಮತ್ತು
ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ**
**ಪ್ರಕರಣ ಸಂಖ್ಯೆ:ಕಾನಪ:238:09:ಎಫ್:710–11, ದಿನಾಂಕ:10ನೇ ಸೆಪ್ಟೆಂಬರ್, 2009**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ಹಂಪಮ್ಮ ಗಂ: ಬಸಪ್ಪ, ವಯಸ್ಸು:45 ವರ್ಷ, ವೃತ್ತಿ: ಏನೂ ಇಲ್ಲ, ವಾಸ: ಸುಗ್ಗೇನಹಳ್ಳಿ (ಪೋ), ಹೊಸಪೇಟೆ (ತಾ), ಬಳ್ಳಾರಿ ಜಿಲ್ಲೆ. | **ವಿರುದ್ಧ** | 1) ಶ್ರೀ ದೊಡ್ಡಬಸಪ್ಪ ತಂ: ಗಡೆಪ್ಪ ವಯಸ್ಸು:50 ವರ್ಷ, ವೃತ್ತಿ ಟ್ರಾಕ್ಟರ್–ಟ್ರೈಲರ್‌ನ ಮಾಲೀಕರು, ಸಂಖ್ಯೆ: ಕೆಎ–35:ಟಿ–4481:82, ವಾಸ: ಸುಗ್ಗೇನಹಳ್ಳಿ (ಪೋ), ಹೊಸಪೇಟೆ (ತಾ), ಬಳ್ಳಾರಿ ಜಿಲ್ಲೆ. 2) ಬ್ರಾಂಚ್ ಮ್ಯಾನೇಜರ್, ಮೆ: ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ. |

**ಪ್ರಕಟಣೆ**

ಶ್ರೀಮತಿ ಹಂಪಮ್ಮಳು ಮೃತ ಗಾದಿಲಿಂಗಪ್ಪನ ತಾಯಿಯಾಗಬೇಕೆಂದು, ಶಾಸನಬದ್ಧ ವಾರಸುದಾರರೆಂದು, ಮೃತ ಗಾದಿಲಿಂಗಪ್ಪನು ದಿನಾಂಕ:07.06.2008ರಂದು ಕರ್ತವ್ಯದ ಮೇಲಿದ್ದಾಗ ಅಪಘಾತವಾಗಿ ತೀವ್ರಗಾಯಗೊಂಡು

ಮೃತಪಟ್ಟಿರುತ್ತಾನೆಂದು, ಮೃತನು 1ನೇ ಪ್ರತಿವಾದಿಗಳಲ್ಲಿ ಕೆಲಸ ಮಾಡಿ ದಿನಕ್ಕೆ 150–00 ರೂ. ಸಂಬಳ ಪಡೆದು ತನ್ನ ಹಾಗೂ ತಮ್ಮ ಕುಟುಂಬ ಜೀವನ ಸಾಗಿಸುತ್ತಿದ್ದನೆಂದು, ಈಗ ಆತನಿಲ್ಲದೆ ಜೀವನ ಸಾಗುವುದು ತುಂಬಾ ಕಷ್ಟಕರವಾಗಿರುತ್ತದೆಂದು ತಿಳಿಸಿ ದಾವಾ ಅರ್ಜಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾಳೆ.

ಈ ಸಂಬಂಧವಾಗಿ ಬೇರೆಯಾರಾದರೂ ಅಥವಾ ಸಂಬಂಧೀಕರು ಮೃತನ ವಾರಸುದಾರರೆಂದು ಪರಿಗಣಿಸಬೇಕೆಂದು ಕೋರಿದಲ್ಲಿ ಅಂಥಹವರು ಈ ಪ್ರಕಟಣೆ ಪ್ರಕಟಗೊಂಡ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸತಕ್ಕದ್ದು, ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕಾಧಿಕಾರಿ ಮತ್ತು
ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ**

**ಪ್ರಕರಣ ಸಂಖ್ಯೆ:ಕಾನಪ:239:09:712–13, ದಿನಾಂಕ:10ನೇ ಸೆಪ್ಟೆಂಬರ್, 2009**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ದೇವಿ ಗಂ: ರಾಮು, ವಯಸ್ಸು:21 ವರ್ಷ, ವೃತ್ತಿ: ಮನೆಕೆಲಸ (ಮೃತನ ಸಹೋದರಿ).<br>2) ಕು. ಲಕ್ಷ್ಮಿ ಗಂ: ಚಂದ್ರಪ್ಪ, ವಯಸ್ಸು:10 ವರ್ಷ, ವೃತ್ತಿ ಏನೂ ಇಲ್ಲ, (ಮೃತನ ಸಹೋದರಿ) ವಾಸ: ಬಿಂಡಿಹಟ್ಟಿ ಗ್ರಾಮ, ಬಳ್ಳಾರಿ. | **ವಿರುದ್ಧ** | 1) ಪಿ. ಅಜಯ್‌ಕುಮಾರ್, ಮೆ: ಮಾಡಲ್‌ಸ್ಟೋನ್ ಕ್ರಷರ್, ದೊಡ್ಡ ಅಂತಾಪುರ ಗ್ರಾಮ, ಸಂಡೂರು (ತಾ), ಬಳ್ಳಾರಿ ಜಿಲ್ಲೆ.<br>2) ಡಿವಿಜನಲ್ ಮ್ಯಾನೇಜರ್, ಮೆ: ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ. |

**ಪ್ರಕಟಣೆ**

ಶ್ರೀಮತಿ ದೇವಿ ಗಂ: ರಾಮು ಮತ್ತು ಕು: ಲಕ್ಷ್ಮಿ ತಂ: ಚಂದ್ರಪ್ಪರು ತಾವು ಮೃತ ರಾಮಾಂಜನಿಗೆ ಸಹೋದರಿಯರಾಗಬೇಕೆಂದು ಹಾಗೂ ವಾರಸುದಾರರೆಂದು ತಿಳಿಸಿ ದಿನಾಂಕ:16.09.2008 ರಂದು ಮೃತ ರಾಮಾಂಜಿನಿ 1ನೇ ಪ್ರತಿವಾದಿಗಳಲ್ಲಿ ಸೂಪರ್‌ವೈಸರ್ ಆಗಿ ಕೆಲಸ ಮಾಡುತ್ತಿದ್ದಾಗ ಅಪಘಾತವಾಗಿ ತೀವ್ರಗಾಯಗೊಂಡು ಚಿಕಿತ್ಸೆ ಪಡೆಯುತ್ತಿದ್ದಾಗ ಫಲಕಾರಿಯಾಗದೆ ದಿನಾಂಕ:30.01.2008 ರಂದು ಮೃತಪಟ್ಟಿರುತ್ತಾನೆಂದು, ಮೃತನು ತಿಂಗಳಿಗೆ ರೂ.4500–00 ಗಳ ವೇತನ ಪಡೆದು ತನ್ನ ಹಾಗೂ ನಮ್ಮಗಳ ಕುಟುಂಬ ನಿರ್ವಹಣೆ ಮಾಡುತ್ತಿದ್ದನೆಂದು, ಈಗ ಆತನ ಮರಣದಿಂದ ತಮ್ಮ ಜೀವನ ಸಾಗುವುದು ತುಂಬಾ ಕಷ್ಟಕರವಾಗಿರುತ್ತದೆಂದು ತಿಳಿಸಿ ಮೃತನ ನಷ್ಟ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಕೋರಿ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಂಬಂಧೀಕರು ಅಥವಾ ಬೇರೆ ಯಾರಾದರೂ ವಾರಸುದಾರರೆಂದು ಪರಿಗಣಿಸಬೇಕೆಂದು ಕೋರಿದಲ್ಲಿ ಅಂಥಹವರು ಈ ನ್ಯಾಯಾಲಯದ ನಾಮಫಲಕ ಹಾಗೂ ಕರ್ನಾಟಕ ರಾಜ್ಯಪತ್ರ ಸರ್ಕಾರಿ ಹೊರ ಮುದ್ರಣಾಲಯದಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸತಕ್ಕದ್ದು. ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕಾಧಿಕಾರಿ ಮತ್ತು
ಪಿ.ಆರ್.942 ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

**IN THE COURT OF COMMISSIONER FOR WORKMEN'S COMPENSATION, BIDAR**

**No.LOB/WCA/Cr-F-43/2009**

| **Applicants"** | **V/s** | **Respondents:** |
|---|---|---|
| 1) Chanderkala W/o Late Basawaraj Udgiri, Age about:40 yrs, Occup: Houshold, R/o Gaoundigalli, Basavakalyan, Dist: Bidar and 3 others. | | 1) Khutubuddin S/o Mohaib sab Owner of Truck No.MH-25/B-9417, R/o. Gunjoti Tq: Umerga (M.S.) Now at Goundi-galli, Basavakalyan, Dist: Bidar.<br>2) The Manager (Legal) Royal Sundeeram Aliance Insurance, Co.Ltd., No.45 & 46 Sunderam Towers whilu Road, Chennai-600014. |

**PROCLAIMATION**

Sri/Smt: Chandera Kala W/o.F/o.S/o. Baswaraj R/o. Goundi Galli, Basava Kalyan, Dist: Bidar have/has filed application in this Court claiming compensation stating that Late: Basawaraj was working as Driver Under the Respondent No. he met with an accident arising out of and during the course of employment as a result he died on 05.03.2009.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications on objections are received within the specified date the court will proceeded further in the matter.

Commissioner for Workmen's
Compensation, Bidar.

PR-943

**ಕೃಷಿ ಆಯುಕ್ತರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀ ಎಸ್.ಕೆ. ಕಳ್ಳೀಬಡ್ಡಿ, ಕೃಷಿ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಶಿರಹಟ್ಟಿ ಇವರು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾದ ಬಗ್ಗೆ ಶಿಸ್ತುಕ್ರಮ.

**ಓದಲಾಗಿದೆ:**
1) ಜಂಟಿ ಕೃಷಿ ನಿರ್ದೇಶಕರು, ಗದಗ ರವರ ಪತ್ರ ಸಂಖ್ಯೆ: ಜಕೃನಿಗ/ಆ–1/ವಿಚಾರಣೆ/2006–07/5898–99, ದಿನಾಂಕ:28.12.2006/04.01.2007.
2) ಇಲಾಖಾ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–3/34/06–07, ದಿನಾಂಕ:06.01.2007 ಮತ್ತು 03.08.2007.
3) ಆರೋಪಿತರ ಮನವಿ ದಿನಾಂಕ:27.07.2007.
4) ಇಲಾಖಾ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–3/34/34/06–07, ದಿನಾಂಕ:03.08.2007.
5) ಜಂಟಿ ಕೃಷಿ ನಿರ್ದೇಶಕರು, ಗದಗ ಇವರ ಪತ್ರದ ಸಂಖ್ಯೆ: ಜಕೃನಿಗ/ಆ–1/ವಿಚಾರಣೆ–3/2006–07/7691, 13.03.2008.
6) ಇಲಾಖಾ ಪತ್ರದ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–3/06–07, ದಿನಾಂಕ:25.02.2008.
7) ನೌಕರರ ಸ್ವೀಕೃತಿ ದಿನಾಂಕ:01.03.2008.
8) ಇಲಾಖಾ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–3/34/06–07, ದಿನಾಂಕ:16.05.2008.
9) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ:05.01.2009.
10) ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–3/34/2006–07 ದಿನಾಂಕ:05.03.2009, 2ನೇ ಕಾರಣ ಕೇಳುವ ಸೂಚನಾ ಪತ್ರ.
11) ಶ್ರೀ ಎಸ್.ಕೆ. ಕಳ್ಳೀಬಡ್ಡಿ, ಕೃಷಿ ಸಹಾಯಕ, ಇವರ ಲಿಖಿತ ಹೇಳಿಕೆ ದಿನಾಂಕ:13.04.2009.

**ಪ್ರಸ್ತಾವನೆ:**

ಶ್ರೀ ಎಸ್.ಕೆ. ಕಳ್ಳೀಬಡ್ಡಿ, ಕೃಷಿ ಸಹಾಯಕ ಇವರು ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಶಿರಹಟ್ಟಿ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:16.09.2004 ರಿಂದ 24.06.2005 ರವರೆಗೆ, ದಿನಾಂಕ:16.11.2005 ರಿಂದ 26.11.2005 ರವರೆಗೆ ಮತ್ತು ದಿನಾಂಕ:09.05.2006 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿ ಆಗಿದ್ದರಿಂದ ಓದಲಾದ ಕ್ರ.ಸಂ.(1)ರಲ್ಲಿ ಜಂಟಿ ಕೃಷಿ ನಿರ್ದೇಶಕರು, ಗದಗ ರವರು ಶಿಸ್ತುಕ್ರಮ ಕೈಗೊಳ್ಳುವಂತೆ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಪ್ರಕರಣವನ್ನು ಗಂಭೀರವಾಗಿ ಪರಿಗಣಿಸಿ ಓದಲಾದ ಕ್ರ.ಸಂ.(2)ರ ಆದೇಶದಲ್ಲಿ ಸದರಿಯವರ ವಿರುದ್ಧ ವಿಚಾರಣೆಯನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ನಿಲಂಬನೆಯಲ್ಲಿಡಲಾಗಿತ್ತು. ಓದಲಾದ ಕ್ರ.ಸಂ.(3) ರಲ್ಲಿನ ಮನವಿಯಂತೆ ಸದರಿಯವರ ವಿರುದ್ಧದ ಆರೋಪದ ಬಗ್ಗೆ ವಿಚಾರಣೆಯನ್ನು ಬಾಕಿ ಇಟ್ಟು ಓದಲಾದ ಕ್ರ.ಸಂ.(4)ರಂತೆ ನಿಲಂಬನೆಯಿಂದ ವಿಖಂಡನೆಗೊಳಿಸಿ ಸಹಾಯಕ ಕೃಷಿ ನಿರ್ದೇಶಕರು, ಮುಂಡರಗಿ ಕಛೇರಿಗೆ ಮರುನೇಮಕ ಮಾಡಲಾಗಿರುತ್ತದೆ. ಓದಲಾದ ಕ್ರ.ಸಂ.(5)ರ ಪತ್ರದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ಅಡಿಯಲ್ಲಿ ಅನುಬಂಧ–1 ರಿಂದ 4ನ್ನು ಜಾರಿ ಮಾಡಲಾಯಿತು. ಈ ದೋಷಾರೋಪಣೆ ಪಟ್ಟಿ ತಲುಪಿದ 15 ದಿನಗಳೊಳಗಾಗಿ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಸೂಚಿಸಲಾಗಿತ್ತು, ಜಾರಿ ಮಾಡಲಾದ ದೋಷಾರೋಪಣೆ ಪಟ್ಟಿಯನ್ನು ಓದಲಾದ ಕ್ರ.ಸಂ.(7) ರಲ್ಲಿ ನೌಕರರು ದಿನಾಂಕ:01.03.2008ರಲ್ಲಿ ಸ್ವೀಕರಿಸಿರುವ ಸ್ವೀಕೃತಿಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ. ಇಲಾಖಾ ಸೂಚನಾ ಪತ್ರವನ್ನು ಸ್ವೀಕರಿಸಿ ಇಲಾಖೆಗೆ ನಿಗದಿತ ಅವಧಿಯೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಸದರಿ

ಪ್ರಕರಣದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯಲು ವಿಚಾರಣೆ ನಡೆಸಲು ನಿರ್ಧರಿಸಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ಓದಲಾದ ಕ್ರಮಸಂಖ್ಯೆ (8) ರಲ್ಲಿ ನೇಮಿಸಿ ಆದೇಶಿಸಿದೆ. ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ ಓದಲಾದ ಕ್ರಮಸಂಖ್ಯೆ: (9) ರಲ್ಲಿ ವಿಚಾರಣಾ ವರದಿಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಆರೋಪವು ಸಾಕ್ಷಿ ಹಾಗೂ ದಾಖಲಾತಿಗಳ ಆಧಾರದ ಮೇರೆಗೆ ರುಜುವಾತು ಆಗಿರುತ್ತದೆ. ಓದಲಾದ ಕ್ರಮಸಂಖ್ಯೆ (10) ರಲ್ಲಿ ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳುವ ಸೂಚನಾ ಪತ್ರವನ್ನು ಆಪಾದಿತ ನೌಕರರಿಗೆ ಜಾರಿ ಮಾಡಲಾಯಿತು. ಇದನ್ನು ಸ್ವೀಕರಿಸಿ ಲಿಖಿತ ಹೇಳಿಕೆಯನ್ನು ಓದಲಾದ ಕ್ರಮಸಂಖ್ಯೆ (11)ರಲ್ಲಿ ಸಲ್ಲಿಸಿರುತ್ತಾರೆ. ಸದರಿಯವರ ಹೇಳಿಕೆಯಲ್ಲಿ ಪರಿಗಣಿಸಬಹುದಾದ ಯಾವುದೇ ಅಂಶಗಳು ಕಂಡುಬರುವುದಿಲ್ಲ. ಆದ್ದರಿಂದ ಈ ಕೆಳಕಂಡಂತೆ ದಂಡನೆ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ-1/ವಿಚಾರಣೆ-3/34/06-07, ದಿನಾಂಕ:11ನೇ ಸೆಪ್ಟೆಂಬರ್, 2009**

ಈ ಕೆಳಗೆ ಸಹಿ ಮಾಡಿರುವ ಡಾ: ಬಾಬುರಾವ್ ಮುಡಬಿ, ಭಾ.ಆ.ಸೇ. ಕೃಷಿ ಆಯುಕ್ತರು ಹಾಗೂ ಶಿಸ್ತು ಪ್ರಾಧಿಕಾರಿ, ಬೆಂಗಳೂರು, ಆದ ನಾನು ಈ ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಎಸ್.ಕೆ. ಕಳ್ಳೀಬಡ್ಡಿ, ಕೃಷಿ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಶಿರಹಟ್ಟಿ ಹಾಲಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಮುಂಡರಗಿ ಇವರನ್ನು ಆರೋಪಿ ಎಂದು ಪರಿಗಣಿಸಿ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(VI)ರ ಪ್ರಕಾರ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿರುತ್ತೇನೆ.

ಸದರಿಯವರ ನಿಲಂಬನಾ ಅವಧಿಯನ್ನು ನಿಲಂಬನಾ ಅವಧಿಯೆಂದೆ ಪರಿಗಣಿಸಿ ಆದೇಶಿಸಿರುತ್ತೇನೆ. ಅನಧಿಕೃತ ಗೈರು ಹಾಜರಿ ಅವಧಿಯನ್ನು 106 (ಎ) ಪ್ರಕಾರ ಪರಿಗಣಿಸಲು ಆದೇಶಿಸಿರುತ್ತೇನೆ.

ಡಾ: ಬಾಬುರಾವ್ ಮುಡಬಿ

ಪಿ.ಆರ್.944 ಕೃಷಿ ಆಯುಕ್ತರು ಹಾಗೂ ಶಿಸ್ತು ಪ್ರಾಧಿಕಾರಿಗಳು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಆಂಜನೇಯ ದೇವಸ್ಥಾನ ಎದುರು, ವಿದ್ಯಾನಗರ, ದಾವಣಗೆರೆ ಇವರ ಕಾರ್ಯಾಲಯ**

**ವಿಷಯ:** ಸ್ಥಗಿತಗೊಂಡಿರುವ ಮಾಯಕೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಾಯಕೊಂಡ, ದಾವಣಗೆರೆ ತಾಲ್ಲೂಕು, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಸಂಖ್ಯೆ: ಸನಿ31/ಸ್ಥಗಿತ/ಸಿಆರ್-/2009-10, ದಿನಾಂಕ:03.07.2009.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯ ಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಸಂಘದ ಆಡಳಿತ ಮಂಡಳಿ ನಿರ್ದೇಶಕರ/ ಕಾರ್ಯದರ್ಶಿಯವರ ಮಾಹಿತಿ ಲಭ್ಯವಿರುವುದಿಲ್ಲ ಹಾಗೂ ಲೆಕ್ಕಪುಸ್ತಕಗಳು, ಲೆಕ್ಕಪರಿಶೋಧನಾ ವರದಿಗಳು ಲಭ್ಯವಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ.ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-01/2009-10, ದಿನಾಂಕ:25ನೇ ಸೆಪ್ಟೆಂಬರ್, 2009**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಮಾಯಕೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಾಯಕೊಂಡ, ದಾವಣಗೆರೆ ತಾ, ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ

ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, ವೃತ್ತ 2, ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:25.09.2009 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಬಿ. ಕುಬೇರಪ್ಪ**

ಪಿ.ಆರ್.952

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಆಂಜನೇಯ ದೇವಸ್ಥಾನ ಎದುರು, ವಿದ್ಯಾನಗರ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ:** ಸ್ಥಗಿತಗೊಂಡಿರುವ ಅಣಬೇರು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಅಣಬೇರು, ದಾವಣಗೆರೆ ತಾಲ್ಲೂಕು, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಸಂಖ್ಯೆ: ಸನಿ31/ಸ್ಥಗಿತ/ಸಿಆರ್-/2009-10, ದಿನಾಂಕ:03.07.2009.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯ ಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಸಂಘದ ಆಡಳಿತ ಮಂಡಳಿ ನಿರ್ದೇಶಕರ/ ಕಾರ್ಯದರ್ಶಿಯವರ ಮಾಹಿತಿ ಲಭ್ಯವಿರುವುದಿಲ್ಲ ಹಾಗೂ ಲೆಕ್ಕಪುಸ್ತಕಗಳು, ಲೆಕ್ಕಪರಿಶೋಧನಾ ವರದಿಗಳು ಲಭ್ಯವಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

### ನಂ.ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-02/2009-10, ದಿನಾಂಕ:25ನೇ ಸೆಪ್ಟೆಂಬರ್, 2009

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಅಣಬೇರು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಅಣಬೇರು, ದಾವಣಗೆರೆ ತಾ, ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, ವೃತ್ತ 2, ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:25.09.2009 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಬಿ. ಕುಬೇರಪ್ಪ**

ಪಿ.ಆರ್.953

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಆಂಜನೇಯ ದೇವಸ್ಥಾನ ಎದುರು, ವಿದ್ಯಾನಗರ, ದಾವಣಗೆರೆ ಇವರ ಕಾರ್ಯಾಲಯ**

**ವಿಷಯ:** ಸ್ಥಗಿತಗೊಂಡಿರುವ ಹದಡಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹದಡಿ, ದಾವಣಗೆರೆ ತಾಲ್ಲೂಕು, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಸಂಖ್ಯೆ: ಸನಿ31/ಸ್ಥಗಿತ/ಸಿಆರ್-/2009-10, ದಿನಾಂಕ:03.07.2009.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯ ಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಸಂಘದ ಆಡಳಿತ ಮಂಡಳಿ ನಿರ್ದೇಶಕರ/ ಕಾರ್ಯದರ್ಶಿಯವರ ಮಾಹಿತಿ ಲಭ್ಯವಿರುವುದಿಲ್ಲ ಹಾಗೂ ಲೆಕ್ಕಪುಸ್ತಕಗಳು, ಲೆಕ್ಕಪರಿಶೋಧನಾ ವರದಿಗಳು ಲಭ್ಯವಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ.ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್-07/2009-10, ದಿನಾಂಕ:25ನೇ ಸೆಪ್ಟೆಂಬರ್, 2009**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಹದಡಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹದಡಿ, ದಾವಣಗೆರೆ ತಾ, ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, ವೃತ್ತ 2, ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:25.09.2009 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಬಿ. ಕುಬೇರಪ್ಪ**
ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.954

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಆಂಜನೇಯ ದೇವಸ್ಥಾನ ಎದುರು, ವಿದ್ಯಾನಗರ, ದಾವಣಗೆರೆ ಇವರ ಕಾರ್ಯಾಲಯ**

**ವಿಷಯ:** ಸ್ಥಗಿತಗೊಂಡಿರುವ ಗಿರಿಯಾಪುರ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಗಿರಿಯಾಪುರ, ದಾವಣಗೆರೆ ತಾಲ್ಲೂಕು, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಸಂಖ್ಯೆ: ಸನಿ31/ಸ್ಥಗಿತ/ಸಿಆರ್-11/2009-10, ದಿನಾಂಕ:08.07.2009.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯ ಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ

ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಸಂಘದ ಆಡಳಿತ ಮಂಡಳಿ ನಿರ್ದೇಶಕರ/ ಕಾರ್ಯದರ್ಶಿಯವರ ಮಾಹಿತಿ ಲಭ್ಯವಿರುವುದಿಲ್ಲ ಹಾಗೂ ಲೆಕ್ಕಪುಸ್ತಕಗಳು, ಲೆಕ್ಕಪರಿಶೋಧನಾ ವರದಿಗಳು ಲಭ್ಯವಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ.ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–08/2009–10, ದಿನಾಂಕ:25ನೇ ಸೆಪ್ಟೆಂಬರ್, 2009**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಗಿರಿಯಾಪುರ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಗಿರಿಯಾಪುರ, ದಾವಣಗೆರೆ ತಾ, ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, ವೃತ್ತ 2, ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:25.09.2009 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

**ಬಿ. ಕುಬೇರಪ್ಪ**
ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.955

**ತಹಸೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು**

**ನಂ.ಎಂಎಸ್‌ಸಿ ಸಿಆರ್ 67/2009–10, ಹಳೆ ನಂ.ಎಂ.ಎಸ್.ಸಿ. ಸಿಆರ್ 8/08–09, ದಿನಾಂಕ:22ನೇ ಆಗಸ್ಟ್, 2009**

**ವಿಷಯ:** ಶ್ರೀಮತಿ ಕೆ. ಸರಸ್ವತಿ ಬಿನ್ ಕೆ. ಸಮಲ್, ನಂ.255/1, ಪಾಪಣ್ಣ ರಸ್ತೆ, ಅಶ್ವಥನಗರ, ಥಣಿಸಂದ್ರ ಮುಖ್ಯರಸ್ತೆ, ಬೆಂಗಳೂರು ಇವರಿಗೆ ದಿನಾಂಕ:17.08.1990 ರಂದು ನೀಡಲಾಗಿದ್ದ ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸಿ ಆದೇಶಿಸಿರುವುದನ್ನು ಪುನರ್ ಪರಿಶೀಲಿಸುವ ಬಗ್ಗೆ.

**ಉಲ್ಲೇಖ:** ಗೌ: ಕರ್ನಾಟಕ ಉಚ್ಚನ್ಯಾಯಾಲಯದ ರಿಟ್ ಅರ್ಜಿ ನಂ.14002/2008 ರಲ್ಲಿ ದಿನಾಂಕ:05.12.2008 ರಂದು ಮಾಡಿರುವ ಆದೇಶ.

**ಪ್ರಸ್ತಾವನೆ:**

ಶ್ರೀಮತಿ ಕೆ. ಸರಸ್ವತಿ ಬಿನ್ ಕೆ. ಸಮಲ್, ಪಾಪಣ್ಣ ರಸ್ತೆ, ಅಶ್ವಥನಗರ, ಥಣಿಸಂದ್ರ ಮುಖ್ಯರಸ್ತೆ, ಬೆಂಗಳೂರು ಇವರು ಪರಿಶಿಷ್ಟ ಜಾತಿಗೆ ಸೇರಿದ ನಾಯಡ್/ ನಯಾಡಿ ಜಾತಿಯವರೆಂದು ಮಾಹಿತಿಯನ್ನು ಸಲ್ಲಿಸುವ ಮೂಲಕ ಈ ಕಛೇರಿಯಿಂದ ಸಂಖ್ಯೆ: ಎಂಎಸ್‌ಸಿ 1074/90–91 ದಿನಾಂಕ:17.08.1990 ರಂತೆ ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು ಪಡೆದಿರುತ್ತಾರೆ. ಆನಂತರ ಇಂಡಿಯನ್ ಆಡಿಟ್ ಮತ್ತು ಅಕೌಂಟ್ಸ್ ಇಲಾಖೆಯಲ್ಲಿ ಸೆಕ್ಷನ್ ಆಫೀಸರ್ ಹುದ್ದೆಗೆ ಪರಿಶಿಷ್ಟ ಜಾತಿ ಮೀಸಲಾತಿ ಪ್ರವರ್ಗದಲ್ಲಿ ಆಯ್ಕೆ ಆಗಿ ಕೆಲಸ ಮಾಡುತ್ತಿದ್ದಾಗ, ಇವರು ತಪ್ಪು ಮಾಹಿತಿಯನ್ನು ನೀಡಿ ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು ಪಡೆದು ಆನಂತರ ಪರಿಶಿಷ್ಟ ಜಾತಿಯವರಿಗೆ ಮೀಸಲಾದ ಒಂದು ಅಧಿಕಾರಿ ಹುದ್ದೆಯನ್ನು ಮೋಸದಿಂದ ಪಡೆದಿದ್ದಾರೆಂದು, ಸಮಾಜ ಕಲ್ಯಾಣ ಇಲಾಖೆ ಗಮನಕ್ಕೆ ಬಂದ ಹಿನ್ನೆಲೆಯಲ್ಲಿ ಇವರ ನಿಜವಾದ ಜಾತಿಯನ್ನು ಪತ್ತೆ ಹಚ್ಚಲು ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವರದಿಯನ್ನು ನೀಡಿರುತ್ತಾರೆ.

2) ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಆದೇಶ ಸಂಖ್ಯೆ: ಜಿ.ಸ.ಕ.ಅ(ನ) ಸಿಆರ್ 19/07–08 ದಿನಾಂಕ:16.01.2008 ರಂತೆ ದಿನಾಂಕ:11.11.1993 ರ ಪೂರ್ವದಲ್ಲಿ ನೀಡಿರುವ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳ ಸತ್ಯಾಶೀಲತೆ ಬಗ್ಗೆ ಜಾತಿ ಪ್ರಮಾಣ ಪತ್ರವನ್ನು ನೀಡಿರುವ ಪ್ರಾಧಿಕಾರವೇ ಪರಿಶೀಲಿಸಿ ಸೂಕ್ತ ಕ್ರಮಕೈಗೊಳ್ಳಬೇಕೆಂದು ತಿಳಿಸಿದ್ದಾರೆ. ವಿಚಾರಣಾ ವರದಿಯ ಅಂಶಗಳನ್ನು ಮತ್ತು ಲಭ್ಯ ದಾಖಲೆಗಳನ್ನು ಪರಿಶೀಲಿಸಿದ ನಂತರ ಅರ್ಜಿದಾರರು ನಾಯಡ್ ಜಾತಿಗೆ ಸೇರಿದವರೆಂದು ಸಮರ್ಥಿಸಿಕೊಳ್ಳಲು ಸೂಕ್ತ ದಾಖಲೆಗಳನ್ನು ಹಾಜರ್‌ಪಡಿಸುವಲ್ಲಿ ವಿಫಲರಾಗಿರುತ್ತಾರೆಂದು

ತೀರ್ಮಾನಿಸಿ, ದಿನಾಂಕ:17.08.1990 ರಂದು ಈ ಕಛೇರಿಯಿಂದ ನೀಡಲಾಗಿದ್ದ ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸಿ ಈ ಕಛೇರಿ ಸಂಖ್ಯೆ:ಎಂಎಸ್‌ಸಿ ಸಿಆರ್ 8/08–09 ದಿನಾಂಕ:13.10.2008 ರಂತೆ ಆದೇಶಿಸಲಾಗಿತ್ತು.

3) ಆನಂತರ ಶ್ರೀಮತಿ ಕೆ.ಸರಸ್ವತಿ ಬಿನ್ ಕೆ.ಸಮಲ್ ಇವರು ಈ ಆದೇಶದ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ನಂ.14002/2008ರಂತೆ ಮೇಲ್ಮನವಿ ಸಲ್ಲಿಸಿದ್ದು, ಗೌರವಾನ್ವಿತ ನ್ಯಾಯಾಲಯವು ದಿನಾಂಕ:05.12.2008ರಲ್ಲಿ ಆದೇಶ ನೀಡಿ, ಈ ಕಛೇರಿಯ ಸಂಖ್ಯೆ: ಎಂಎಸ್‌ಸಿ ಸಿಆರ್ 8/2008–09 ದಿನಾಂಕ:13.10.2008ರ ಆದೇಶವನ್ನು ವಜಾ ಮಾಡಿ, ಪ್ರಕರಣವನ್ನು ಈ ಕಛೇರಿಗೆ ಹಿಂದಿರುಗಿಸಿ, ನ್ಯಾಯಾಲಯವು ಮಾಡಿರುವ ಅವಲೋಕನಗಳನ್ನು ಗಣನೆಗೆ ತೆಗೆದುಕೊಂಡು ಅರ್ಜಿದಾರರಿಗೆ ಕಾಲಾವಕಾಶ ನೀಡಿ ವಿಚಾರಣೆ ಮಾಡಿ ನಿಯಮಾನುಸಾರ ತೀರ್ಮಾನ ತೆಗೆದುಕೊಳ್ಳಲು ನಿರ್ದೇಶಿಸಿರುತ್ತಾರೆ.

4) ಗೌರವಾನ್ವಿತ ನ್ಯಾಯಾಲಯದ ಆದೇಶದಂತೆ, ಪ್ರಕರಣದ ಅಂಶಗಳನ್ನು ಮತ್ತು ದಾಖಲೆಗಳನ್ನು ಮರುಪರಿಶೀಲಿಸಲು ಅರ್ಜಿದಾರರಿಗೆ ಈ ಕಛೇರಿಯಿಂದ ನೋಟೀಸ್ ನೀಡಿ, ಅವರು ನಯಾಡಿ ಜಾತಿಯವರು ಎಂಬುದನ್ನು ಸಮರ್ಥಿಸಿಕೊಳ್ಳಲು ಲಭ್ಯವಿರುವ ದಾಖಲೆಗಳೊಂದಿಗೆ ಹೇಳಿಕೆ ನೀಡುವಂತೆ ತಿಳಿಸಲಾಗಿತ್ತು. ಅದರಂತೆ ಅರ್ಜಿದಾರರು ಕೆಳಕಂಡ ದಾಖಲೆಗಳನ್ನು ಹಾಜರುಪಡಿಸಿರುತ್ತಾರೆ.

ಅ) ಪ್ರೈಮರಿ 1 ರಿಂದ 7ನೇ ತರಗತಿಯವರೆಗೆ ವ್ಯಾಸಂಗ ಮಾಡಿರುವ ಬಗ್ಗೆ ಶಾಸ್ತ್ರಿ ಇಂಗ್ಲಿಷ್ ಹೈಯರ್ ಪ್ರೈಮರಿ ಶಾಲೆ ಬೆಂಗಳೂರು ಇವರು ನೀಡಿರುವ ದೃಢೀಕರಣ ಪತ್ರ ಕೆ.ಸರಸ್ವತಿ, ಇವರು ಈ ಶಾಲೆಯಲ್ಲಿ 1975 ರಿಂದ 1982 ರವರೆಗೆ 1 ರಿಂದ 7ನೇ ತರಗತಿಯವರೆಗೆ ವ್ಯಾಸಂಗ ಮಾಡಿದ್ದು, ಇವರು ನಾಯಡಿ ಪರಿಶಿಷ್ಟ ಜಾತಿಗೆ (Nayadi. SC) ಸೇರಿದ್ದಾರೆಂದು ಮತ್ತು ಇವರ ಜನ್ಮ ದಿನಾಂಕ:13.03.1969 ಎಂಬುದಾಗಿ ನಮೂದಿಸಿದೆ.

ಆ) ಮುಖ್ಯೋಪಾಧ್ಯಾಯರು ಗುಲಾಬಿ ಬಾಲಕಿಯವರ ಪ್ರೌಢ ಶಾಲೆ, ಜಯಮಹಲ್ ಬಡಾವಣೆ, ಬೆಂಗಳೂರು ಇವರು ದಿನಾಂಕ:03.06.2009 ರಂದು ನೀಡಿರುವ ದೃಢೀಕರಣ ಪತ್ರ, ಇದರಲ್ಲಿ ಕೆ.ಸರಸ್ವತಿ ಬಿನ್ ಕೆ.ಸಮಲ್ ಇವರು ಸದರಿ ಶಾಲೆಯಲ್ಲಿ 82–83 ರಿಂದ 84–85 ರವರೆಗೆ 8, 9 ಮತ್ತು 10ನೇ ತರಗತಿವರೆಗೆ ವ್ಯಾಸಂಗ ಮಾಡಿರುವುದಾಗಿ ಮತ್ತು ಇವರು ಪರಿಶಿಷ್ಟ ಜಾತಿಯ ನಯಾಡಿ ಜಾತಿಗೆ ಸೇರಿದವರೆಂದು ಶಾಲೆಯ ದಾಖಲೆಗಳಂತೆ ದೃಢೀಕರಿಸಿದ್ದಾರೆ.

ಇ) ಪ್ರಾಂಶುಪಾಲರು, ಮೌಂಟ್ ಕಾರ್ಮೆಲ್ ಕಾಲೇಜ್ ಇವರು ದಿನಾಂಕ:26.02.2009ರಲ್ಲಿ ನೀಡಿರುವ ದೃಢೀಕರಣ ಪತ್ರ ಇದರಲ್ಲಿ ಕೆ.ಸರಸ್ವತಿ ಇವರು 1987 ರಿಂದ 1990 ರವರೆಗೆ ಬಿ.ಕಾಂ. ಪದವಿ ವ್ಯಾಸಂಗ ಮಾಡಿದ್ದು ಸದರಿ ಸಂಸ್ಥೆಯ ದಾಖಲೆಗಳಂತೆ ಇವರು ಪರಿಶಿಷ್ಟ ಜಾತಿಯ ನಯಾಡ್ ಜಾತಿಯವರೆಂದು ದೃಢೀಕರಿಸಿದ್ದಾರೆ.

ಈ) ಬೆಂಗಳೂರು ಕಾರ್ಪೋರೇಷನ್ ಮೆಟರ್ನಿಟಿ ಆಸ್ಪತ್ರೆಯ ಮೆಡಿಕಲ್ ಆಫೀಸರ್ ದಿನಾಂಕ:13.12.1969 ರಲ್ಲಿ ನೀಡಿರುವ ದೃಢೀಕರಣ ಪತ್ರ ಇದರಲ್ಲಿ ಶ್ರೀಮತಿ ಸುರಯ ಕೋಂ ಕೆ.ಸಮಲ್, ನಂ.206, 2ನೇ ಬ್ಲಾಕ್, 1ನೇ ಮೈನ್, ಜಯನಗರ ಇವರು ದಿನಾಂಕ:13.03.1969 ರಂದು ಆಸ್ಪತ್ರೆಗೆ ಅಡ್ಮಿಟ್ ಆಗಿದ್ದು, ಅದೇ ದಿನ ಸಂಜೆ 6–45ಕ್ಕೆ ಹೆಣ್ಣು ಮಗುವಿಗೆ ಜನ್ಮ ನೀಡಿದ್ದಾರೆಂದು ದೃಢೀಕರಿಸಿದ್ದಾರೆ.

ಉ) ನಯಾಡ್/ ನಯಾಡಿ ಜಾತಿಯು ಪರಿಶಿಷ್ಟ ಜಾತಿಗೆ ಸೇರಿರುವ ಬಗ್ಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಲ್‌ಎಡಬ್ಲ್ಯೂ 117 ಎಲ್‌ಸಿಎ 1976 ದಿನಾಂಕ:03.11.1976 ಮತ್ತು ಅಧಿಸೂಚನೆ ಸಂಖ್ಯೆ: ಎಲ್‌ಎಡಬ್ಲ್ಯೂ 58 ಎಲ್‌ಸಿಆರ್ 77 ದಿನಾಂಕ:03.09.1977 ಇವುಗಳ ದೃಢೀಕೃತ ಪ್ರತಿಗಳನ್ನು ಹಾಜರುಪಡಿಸಿದ್ದು, ಮೊದಲನೆ ಅಧಿಸೂಚನೆಯಲ್ಲಿನ ಪಟ್ಟಿಯಲ್ಲಿ ಕ್ರ.ಸ.84 ರಲ್ಲಿನ 'ನಯಾಡ್' ಜಾತಿಯನ್ನು ಪರಿಶಿಷ್ಟ ಜಾತಿ ಎಂದು ಎರಡನೇ ಅಧಿಸೂಚನೆಯಲ್ಲಿನ ಪಟ್ಟಿಯಲ್ಲಿ ಕ್ರ.ಸಂ.84 ರಲ್ಲಿನ ನಯಾಡಿ ಜಾತಿಯನ್ನು ಪರಿಶಿಷ್ಟ ಜಾತಿ ಎಂದು ಘೋಷಿಸಿದೆ.

ಊ) ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ಸಿವಿಲ್ ಅಪೀಲು ನಂ.1387/91ರಲ್ಲಿ ಭಾರತ ಸರ್ಕಾರದ ವಿರುದ್ಧ ದೂದ್‌ನಾಥ್ ಪ್ರಸಾದ್ ಪ್ರಕರಣದಲ್ಲಿ ತಾ:04.01.2000 ರಂದು ಆಗಿರುವ ಆದೇಶದ ಎಕ್ಸಾಟ್ರಾಕ್ಟ್ ಇದರಲ್ಲಿ ಪ್ರತಿವಾದಿಯ ತಂದೆ–ತಾಯಿಗಳು ಮೂಲತಃ ಬಿಹಾರ್ ರಾಜ್ಯದವರಾಗಿದ್ದು, ಅಲ್ಲಿ ಅವರಿಗೆ ಸ್ವಲ್ಪ ಜಮೀನು ಸಹಾ ಇದ್ದು ಪ್ರತಿವಾದಿಯು ಪದವಿ ಪರೀಕ್ಷೆಯವರೆಗೆ ಎಲ್ಲಾ ವಿದ್ಯಾಭ್ಯಾಸವನ್ನು ಅದೇ ರಾಜ್ಯದಲ್ಲಿ ಮುಗಿಸಿದ್ದು, ಆನಂತರ ಪ್ರತಿವಾದಿ ಮತ್ತು ಅವರ ತಂದೆ ತಾಯಿಯವರು ಪಶ್ಚಿಮ ಬಂಗಾಳ ರಾಜ್ಯಕ್ಕೆ ಹೋಗಿ, ಅಲ್ಲಿ ಸಾಮಾನ್ಯ ನಿವಾಸಿಗಳಾಗಿ ನೆಲಸಿದ್ದು, ಆನಂತರ ಪ್ರತಿವಾದಿಯು ಪರಿಶಿಷ್ಟ ಜಾತಿಗೆ ಸೇರಿದವರೆಂದು (ಮುನಿಯ ಜಾತಿಗೆ) ಪಶ್ಚಿಮ ಬಂಗಾಳ ರಾಜ್ಯದಲ್ಲಿ ಪ್ರಮಾಣ ಪತ್ರ ಪಡೆದು, ಕೇಂದ್ರ ಸರ್ಕಾರದ ಕಂಟ್ರೋಲರ್ ಅಂಡ್ ಆಡಿಟರ್ ಜನರಲ್ ಕಛೇರಿಯಲ್ಲಿ ಪರಿಶಿಷ್ಟ ಜಾತಿಗೆ ಮೀಸಲು ಇರಿಸಲಾದ ಹುದ್ದೆಗೆ ಆಯ್ಕೆಯಾಗಿ ನೇಮಕಗೊಂಡಿರುತ್ತಾರೆ. ಪ್ರತಿವಾದಿಯು ಈ ರೀತಿ ಪಡೆದಿರುವ "ಪರಿಶಿಷ್ಟ ಜಾತಿ ಪ್ರಮಾಣ ಪತ್ರದ" ಸಿಂಧುತ್ವವನ್ನು ಪ್ರಶ್ನಿಸಿ ಭಾರತ ಸರ್ಕಾರವು ಪ್ರತಿವಾದಿ ವಿರುದ್ಧ ಸರ್ವೋಚ್ಚ ನ್ಯಾಯಾಲಯದಲ್ಲಿ ಮೇಲ್ಕಂಡ ಪ್ರಕರಣದಲ್ಲಿ ಪ್ರಶ್ನಿಸಿದಾಗ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯವು ಪ್ರಕರಣದ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ನಂತರ ಪ್ರತಿವಾದಿಯ ತಂದೆ–ತಾಯಿಗಳು ಸುಮಾರು 30 ವರ್ಷಗಳಿಂದ ಪಶ್ಚಿಮ ಬಂಗಾಳ ರಾಜ್ಯದ ಹೌರಾ ಜಿಲ್ಲೆಯಲ್ಲಿ ವಾಸವಿದ್ದು, ಅವರು ಸದರಿ ರಾಜ್ಯದ ಸಾಮಾನ್ಯ ನಿವಾಸಿಗಳಾಗಿದ್ದು, ಅವರು ಸೇರಿರುವ "ಮುನಿಯ ಜಾತಿಯು" ಬಿಹಾರ್ ರಾಜ್ಯದಲ್ಲಿ ಪರಿಶಿಷ್ಟ ಜಾತಿಗೆ

ಸೇರಿರುವುದಿಲ್ಲ. ಆದರೆ, ಪಶ್ಚಿಮ ಬಂಗಾಳ ರಾಜ್ಯದಲ್ಲಿ ಈ ಜಾತಿಯನ್ನು ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಸೇರಿಸಿ ಅಧಿಸೂಚನೆ ಆಗಿರುವುದರಿಂದ, 1965 ರಲ್ಲಿ ಪ್ರತಿವಾದಿ ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು ಪಡೆದು, ಪರಿಶಿಷ್ಟ ಜಾತಿ ಮೀಸಲು ಹುದ್ದೆಗೆ ನೇಮಕಗೊಂಡಿರುವುದು ಸರಿಯಾಗಿದೆ ಎಂದು ಎತ್ತಿಹಿಡಿದಿರುತ್ತಾರೆ.

ಪ್ರಸ್ತುತ ಪ್ರಕರಣದಲ್ಲಿ ಶ್ರೀಮತಿ ಕೆ.ಸರಸ್ವತಿ ಇವರು ಮನವಿಯಲ್ಲಿ ತನ್ನ ಪ್ರಕರಣದಲ್ಲಿನ ಅಂಶಗಳು ಮೇಲ್ಕಂಡ ಪ್ರಕರಣದಲ್ಲಿನ ಅಂಶಗಳಿಗೆ ಹೋಲಿಕೆ ಇರುವುದರಿಂದ ಮೇಲ್ಕಂಡ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ತತ್ವವನ್ನು ಅನ್ವಯಿಸಿ ತನಗೆ ಸ್ವಾಭಾವಿಕ ನ್ಯಾಯ ದೊರಕಿಸಿಕೊಟ್ಟು ತನಗೆ ನೀಡಿದ್ದ ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸಿರುವ ಆದೇಶವನ್ನು ಹಿಂತೆಗೆದುಕೊಳ್ಳಬೇಕೆಂದು ಕೋರಿದ್ದಾರೆ.

ಋ) ಪ್ರತಿವಾದಿಯ ತಂದೆ ಕೆ.ಸಮಲ್‌ರವರು ಕೇಂದ್ರ ಸರ್ಕಾರದ ರಸ್ತೆ ಸಾರಿಗೆ ಮಂತ್ರಾಲಯದಲ್ಲಿ ಬೆಂಗಳೂರಿನಲ್ಲಿರುವ ಅಧೀಕ್ಷಕ ಇಂಜಿನಿಯರ್ ರವರ ಕಛೇರಿಯಲ್ಲಿ ವಾಹನ ಚಾಲಕನಾಗಿ ಕೆಲಸ ಮಾಡುತ್ತಿದ್ದು ಇವರು ಪರಿಶಿಷ್ಟ ಜಾತಿಗೆ ಸೇರಿದ್ದಾರೆಂದು, ಅಧೀಕ್ಷಕ ಇಂಜಿನಿಯರ್ ನೀಡಿರುವ ಪ್ರಮಾಣ ಪತ್ರ ಹಾಜರುಪಡಿಸಿ, ತನ್ನ ತಂದೆ ಪರಿಶಿಷ್ಟ ಜಾತಿಯವರೆಂದು ತಿಳಿಸಿದ್ದಾರೆ.

5) ಪ್ರತಿವಾದಿಯ ತಂದೆ ಸರ್ಕಾರಿ ಸೇವೆಯಲ್ಲಿ ಇರುವುದರಿಂದ ಇವರ ನಿಜವಾದ ಜಾತಿಯನ್ನು ತಿಳಿಯಲು, ದಿನಾಂಕ:28.05.2009ರಲ್ಲಿ ಅಧೀಕ್ಷಕ ಇಂಜಿನಿಯರ್, ರಸ್ತೆ ಸಾರಿಗೆ ಇಲಾಖೆ, ಭಾರತ ಸರ್ಕಾರ, ನಂ.417, 4ನೇ ಮಹಡಿ, 2ನೇ ಹಂತ, ಬ್ಲಾಕ್ 'ಬಿ', ಬಹುಮಹಡಿ ಕಟ್ಟಡ ವಿಧಾನವೀದಿ, ಬೆಂಗಳೂರು ಇವರಿಗೆ ಪತ್ರ ಬರೆಯಲಾಗಿತ್ತು. ಪ್ರತಿಯಾಗಿ, ಅಧೀಕ್ಷಕ ಇಂಜಿನಿಯರ್ ರವರು ನಂ.ಆರ್‌ಡಬ್ಲ್ಯೂ-ಬಿಎನ್‌ಜಿ ಟಿಇ ಆರ್‌ಎಸ್ 9/76 846 ದಿನಾಂಕ:03.06.2009ರ ಪತ್ರದಲ್ಲಿ ನೌಕರನ ಸೇವಾಪುಸ್ತಕ ಪರಿಶೀಲಿಸಲಾಗಿ ಇವರು "ಪರಿಶಿಷ್ಟ ಜಾತಿಗೆ ಸೇರಿದ್ದಾರೆ" ಎಂದಷ್ಟೆ ನಮೂದಿಸಿದ್ದು, ಜಾತಿಯ ಹೆಸರನ್ನು ಬರೆದಿಲ್ಲವೆಂದು ತಿಳಿಸಿದ್ದಾರೆ. ಮತ್ತು ನೌಕರನ ಸೇವಾ ಪುಸ್ತಕದ ಎಕ್ಸ್‌ಟ್ರಾಕ್ಟ್ ಕಳುಹಿಸಿದ್ದಾರೆ.

6) ಶ್ರೀಮತಿ ಕೆ.ಸರಸ್ವತಿಯ ತಂದೆ ಕೆ.ಸಮಲ್ ದಿನಾಂಕ:02.06.2009ರಲ್ಲಿ ನೋಟರಿ ಸಮಕ್ಷಮದಲ್ಲಿ ಮಾಡಿರುವ ಅಫಿಡವಿಟ್ ಸಲ್ಲಿಸಿದ್ದಾರೆ. ಇದರಲ್ಲಿ ತಾನು 1962 ರಿಂದ 2003ರವರಿಗೆ ಭಾರತ ಸರ್ಕಾರದ ರಸ್ತೆ ಸಾರಿಗೆ ಇಲಾಖೆಯಲ್ಲಿ ನೌಕರರಾಗಿ ಕೆಲಸ ಮಾಡಿರುವುದಾಗಿ, ಕಳೆದ 40 ವರ್ಷಗಳಿಂದ ಕರ್ನಾಟಕ ರಾಜ್ಯದ ಬೆಂಗಳೂರಿನಲ್ಲಿಯೆ ವಾಸವಿರುವುದಾಗಿ ಮತ್ತು ತಾನು ಪರಿಶಿಷ್ಟ ಜಾತಿಗೆ (ನಯಾಡಿ) ಸೇರಿರುವುದಾಗಿ, ತಾನು ಯಾವುದೇ ವಿಷಯವನ್ನು ಮರೆಮಾಚಿಲ್ಲವೆಂದು ಪ್ರಮಾಣೀಕರಿಸಿರುತ್ತಾರೆ.

7) ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯದ, ಪೊಲೀಸ್ ಸೂಪರಿಂಟೆಂಡೆಂಟ್ ರವರ ಮೂಲಕ ಬಂದಿರುವ ಜಾತಿ ಪರಿಶೀಲನಾ ವರದಿ ಮತ್ತು ತತ್ಸಂಬಂಧ ಸಂಗ್ರಹಿಸಿರುವ ದಾಖಲೆಗಳ ಪರಿಶೀಲನೆಯಂತೆ, ಶ್ರೀಮತಿ ಕೆ.ಸರಸ್ವತಿ ಒರಿಸ್ಸಾ ರಾಜ್ಯದ ಕಟಕ್ ಜಿಲ್ಲೆಯ ಕೆ.ಸಮಲ್‌ರವರ ಮಗಳಾಗಿದ್ದು, ಇವರು ಬೆಂಗಳೂರು ದಕ್ಷಿಣ ತಾಲ್ಲೂಕು, ತಹಶೀಲ್ದಾರ್ ರವರಿಂದ ಪಡೆದ ಜಾತಿ ಪ್ರಮಾಣ ಪತ್ರದ ಆಧಾರದ ಮೇಲೆ ಶಾಖಾಧಿಕಾರಿ ಹುದ್ದೆಗೆ ತಾ:31.07.1992 ರಲ್ಲಿ ನೇಮಕವಾಗಿರುತ್ತಾರೆ. ಕೆ.ಸಮಲ್ ರವರು ಕೇಂದ್ರ ಸರ್ಕಾರದ ರಸ್ತೆ ಸಾರಿಗೆ ಇಲಾಖೆಯಲ್ಲಿ ಕಾರು ಚಾಲಕನಾಗಿದ್ದು, ಒರಿಸ್ಸಾ ರಾಜ್ಯದಿಂದ ಕರ್ನಾಟಕದ ಬೆಂಗಳೂರಿಗೆ ವರ್ಗವಾದ ನಂತರ ದಿನಾಂಕ:13.03.1969ನೇ ಸಾಲಿನಲ್ಲಿ ಕೆ.ಸರಸ್ವತಿ ಯವರು ಜನಿಸಿದ್ದು, ಇವರು ವಿದ್ಯಾಭ್ಯಾಸವನ್ನು 1 ರಿಂದ 7ನೇ ತರಗತಿಯವರೆಗೆ ಶಾಸ್ತ್ರಿ ಇಂಗ್ಲೀಷ್ ನರ್ಸರಿ ಅಂಡ್ ಪ್ರೈಮರಿ ಸ್ಕೂಲಿನಲ್ಲಿ, ಆನಂತರ 8 ರಿಂದ 10ನೇ ತರಗತಿವರೆಗೆ ಗುಲಾಬಿ ಗರ್ಲ್ಸ್ ಹೈಸ್ಕೂಲ್‌ನಲ್ಲಿ ಆನಂತರ ಒಂದನೇ ಮತ್ತು ಎರಡನೇ ಪಿ.ಯು.ಸಿ. ಹಾಗೂ ಬಿ.ಕಾಂ ಪದವಿಯವರೆಗೆ ಮೌಂಟ್ ಕಾರ್ಮೆಲ್ ಕಾಲೇಜು, ಬೆಂಗಳೂರು ಇಲ್ಲಿ ವ್ಯಾಸಂಗ ಮಾಡಿದ್ದು, ಈ ಎಲ್ಲಾ ಸಂಸ್ಥೆಗಳಲ್ಲಿನ ಪ್ರವೇಶ ಮತ್ತು ಇತರೆ ದಾಖಲೆಗಳಲ್ಲಿ ಕೆ.ಸರಸ್ವತಿ ಪರಿಶಿಷ್ಟ ಜಾತಿಯವರೆಂದು ನಮೂದಿಸಿದೆ.

ತಾ:17.08.1990 ರಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ತಹಶೀಲ್ದಾರ್ ರವರಿಂದ ಪರಿಶಿಷ್ಟ ಜಾತಿ ಪ್ರಮಾಣ ಪತ್ರ (ನಾಯಡ್) ಪಡೆದಿರುತ್ತಾರೆ. ಇವರ ತಂದೆ ಸಮಲ್ 1965ನೇ ಸಾಲಿನಲ್ಲಿ ಮದುವೆ ಆಗಿ ಬೆಂಗಳೂರಿಗೆ ವರ್ಗಾವಣೆಗೊಂಡು ಬಂದು ಇಲ್ಲಿಯೇ ಸಾಮಾನ್ಯ ವಾಸಿಯಾಗಿ ನೆಲಸಿದ್ದು, ಇವರ ಸೇವಾ ಪುಸ್ತಕ (Scheduled Caste) ದಲ್ಲಿ ಪರಿಶಿಷ್ಟ ಜಾತಿ ಎಂದು ದಾಖಲಾಗಿದ್ದು ಜಾತಿಯ ಹೆಸರನ್ನು ನಮೂದಿಸಿರುವುದಿಲ್ಲವೆಂದು ತಿಳಿಸಿದ್ದಾರೆ.

ಶ್ರೀಮತಿ ಕೆ.ಸರಸ್ವತಿ ಯವರಿಗೆ 1ನೇ ಮಗ ರಾಹುಲ್, 2ನೇ ಮಗ ಹರಿ ಎಂಬ ಮಕ್ಕಳಿರುವುದಾಗಿ ಇವರ ಗಂಡ ಎನ್.ಎಸ್. ವೆಂಕಟರಾಮನ್ ಮತ್ತು ಮಕ್ಕಳು ಎಲ್ಲರೂ ಒಟ್ಟಿಗೆ ಇದ್ದು, ಸರಸ್ವತಿ ನಯಾಡಿ ಜನಾಂಗದವರೆಂದು ಗಂಡ ತಿಳಿಸಿರುತ್ತಾರೆ. ಕೆ.ಸಮಲ್ ನೀಡಿರುವ ಹೇಳಿಕೆಯಲ್ಲಿ ತನ್ನ ತಂದೆ ಗುರುಬರಿ ಸಮತ್ ಸ್ವಂತ ಗ್ರಾಮ ಕಟಕ್ ಜಿಲ್ಲೆಯ ಬಂಡಿಯಾ ಗ್ರಾಮವೆಂದು ತನ್ನ ತಾಯಿಗೆ ಒಟ್ಟು 06 ಜನ ಮಕ್ಕಳಿದ್ದು ಈ ಪೈಕಿ ತಾನು ಬೆಂಗಳೂರಿನಲ್ಲಿ ಇದ್ದು ಉಳಿದ 05 ಜನರು ಸ್ವಂತ ಗ್ರಾಮ ಒರಿಸ್ಸಾದ ಕಟಕ್ ಜಿಲ್ಲೆಯಲ್ಲಿ ವಾಸವಿರುವುದಾಗಿ ತಿಳಿಸಿರುತ್ತಾರೆ.

ಮುಂದುವರೆದು ಕೆ.ಸರಸ್ವತಿಯ ತಂದೆ ಕೆ.ಸಮಲ್ ಮೂಲತಃ ಒರಿಸ್ಸಾ ರಾಜ್ಯದವರಾಗಿದ್ದು, 'ನಾಯಡ್' ಜಾತಿ ಒರಿಸ್ಸಾ ರಾಜ್ಯದಲ್ಲಿ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಸೇರಿಲ್ಲವೆಂದು ಆದರೆ ಕರ್ನಾಟಕದ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಕ್ರ.ಸಂ.84 ರಲ್ಲಿ

ಸೇರುವುದಾಗಿ, ಕೆ.ಸರಸ್ವತಿಯವರು ಮೀಸಲಾತಿ ಖೋಟಾ ಅಡಿಯಲ್ಲಿ ಶಾಖಾಧಿಕಾರಿ ಹುದ್ದೆಯನ್ನು ಪಡೆಯಲು ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು ಬೆಂಗಳೂರು ದಕ್ಷಿಣ ತಾಲ್ಲೂಕು ತಹಶೀಲ್ದಾರ್‌ರಿಂದ ಪಡೆದಿದ್ದಾರೆಂದು ತಿಳಿಸಿದ್ದಾರೆ.

8) ಶ್ರೀಮತಿ ಕೆ.ಸರಸ್ವತಿ ಇವರು ಪರಿಶಿಷ್ಟ ಜಾತಿ ಮೀಸಲಾತಿ ಅಡಿಯಲ್ಲಿ ಕೇಂದ್ರ ಸರ್ಕಾರದ ಇಲಾಖೆಯಲ್ಲಿ ಅಂದರೆ ಅಕೌಂಟೆಂಟ್ ಜನರಲ್ ರವರ ಕಛೇರಿ, ಬೆಂಗಳೂರು ಕರ್ನಾಟಕ ಇಲ್ಲಿ 03.08.1992 ರಲ್ಲಿ ಶಾಖಾಧಿಕಾರಿ ಹುದ್ದೆಗೆ ನೇಮಕಗೊಂಡಿದ್ದು, ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು ರದ್ದುಪಡಿಸಿ ಬೆಂಗಳೂರು ದಕ್ಷಿಣ ತಹಶೀಲ್ದಾರ್ ರವರು ದಿನಾಂಕ:13.10.2008ರಲ್ಲಿ ಆದೇಶ ಮಾಡಿದ ನಂತರ ಇದರ ಆಧಾರದ ಮೇಲೆ ಅಕೌಂಟೆಂಟ್ ಜನರಲ್ ರವರು ಸಿಸಿಎಸ್ (ಸಿಸಿಎ) ನಿಯಮಾವಳಿ 1965ರ ಅಡಿಯಲ್ಲಿ ಕೆ.ಸರಸ್ವತಿ ಯವರನ್ನು ಸೇವೆಯಿಂದ ವಜಾ ಮಾಡಿ ದಿನಾಂಕ:01.12.2008ರಲ್ಲಿ ಆದೇಶ ಹೊರಡಿಸುವವರೆಗೆ ಸುಮಾರು 16 ವರ್ಷಗಳ ಕಾಲ ಸದರಿ ಇಲಾಖೆಯಲ್ಲಿ ವಿವಿಧ ಹುದ್ದೆಗಳಲ್ಲಿ ಕೆಲಸ ನಿರ್ವಹಿಸಿರುತ್ತಾರೆ.

9) ಉಲ್ಲೇಖದಲ್ಲಿ ಹೇಳಿರುವ ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದಲ್ಲಿನ ನಿರ್ದೇಶನಗಳನ್ನು ಗಣನೆಗೆ ತೆಗೆದುಕೊಂಡು ಕಂಡಿಕೆ 03 ರಿಂದ 08 ರವರೆಗೆ ಹೇಳಿರುವ ವರದಿಗಳನ್ನು ಮತ್ತು ದಾಖಲೆಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿದ ನಂತರ, ಕೆಳಕಂಡ ನಿರ್ಣಯಗಳನ್ನು ತೆಗೆದುಕೊಂಡಿದೆ.

i) ಶ್ರೀಮತಿ ಕೆ.ಸರಸ್ವತಿ ಯವರ ತಂದೆ ಶ್ರೀ ಕೆ.ಸಮಲ್ ಮೂಲತಃ ಒರಿಸ್ಸಾ ರಾಜ್ಯದ ಕಟಕ್ ಜಿಲ್ಲೆಯವರಾಗಿದ್ದು, ಇವರು ಕೇಂದ್ರ ಸರ್ಕಾರದ ರಸ್ತೆ ಸಾರಿಗೆ ಇಲಾಖೆಯಲ್ಲಿ 1962 ರಿಂದ 2003 ರವರೆಗೆ ವಾಹನ ಚಾಲಕನ ಹುದ್ದೆಯಲ್ಲಿ ಕೆಲಸ ಮಾಡಿ ನಿವೃತ್ತಿಯಾಗಿದ್ದು ಇವರ ಸೇವಾ ಪುಸ್ತಕದಲ್ಲಿನ ದಾಖಲೆ ಮತ್ತು ಇತರೆ ಲಭ್ಯ ದಾಖಲೆಗಳಂತೆ ಇವರು "ಪರಿಶಿಷ್ಟ ಜಾತಿ" ಗೆ ಸೇರಿರುತ್ತಾರೆ ಎಂಬುದು ನಿಜವಾಗಿದೆ.

ii) ಪರಿಶಿಷ್ಟ ಜಾತಿಗೆ ಸೇರಿದ ಕೆ.ಸಮಲ್‌ಗೆ ಜನಿಸಿದ ಶ್ರೀಮತಿ ಕೆ.ಸರಸ್ವತಿಯವರು ಸಹಾ ಪರಿಶಿಷ್ಟ ಜಾತಿಯವರು ಎಂಬುದು ನಿರ್ವಿವಾದ ಆದ್ದರಿಂದ ಕೆ.ಸರಸ್ವತಿ ಪರಿಶಿಷ್ಟ ಜಾತಿಗೆ ಸೇರಿದ್ದಾರೆಂಬುದು ನಿಜವಾಗಿದೆ.

iii) ಕೆ.ಸಮಲ್ ಇವರು 1965ನೇ ಸಾಲಿನಲ್ಲಿ ಒರಿಸ್ಸಾ ರಾಜ್ಯದಿಂದ ಕರ್ನಾಟಕದ ಬೆಂಗಳೂರಿಗೆ ವರ್ಗಾವಣೆಗೊಂಡು 2003 ರವರೆಗೆ ಮಾತ್ರ ಇಲಾಖೆಯಲ್ಲಿ ಕೆಲಸ ಮಾಡಿ ಬೆಂಗಳೂರಿನಲ್ಲಿಯೆ ಸೇವೆಯಿಂದ ನಿವೃತ್ತಿ ಆಗಿರುತ್ತಾರೆ. ಇವರು ಬೆಂಗಳೂರಿಗೆ ಬಂದನಂತರ ಕೆ.ಸರಸ್ವತಿಯವರ ದಿನಾಂಕ:13.03.1969ರಲ್ಲಿ ಬೆಂಗಳೂರಿನಲ್ಲಿ ಜನಿಸಿರುತ್ತಾರೆ. ಆನಂತರ, ಇವರು ವಿದ್ಯಾಭ್ಯಾಸವನ್ನು 1975 ರಿಂದ ಪ್ರಾರಂಭಿಸಿದ್ದು ಪ್ರೈಮರಿ 1ನೇ ತರಗತಿಯಿಂದ ಬಿ.ಕಾಂ., ಪದವಿಯವರಿಗೆ ಬೆಂಗಳೂರಿನ ವಿವಿಧ ವಿದ್ಯಾ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿರುತ್ತಾರೆ. ಈ ಎಲ್ಲಾ ವಿದ್ಯಾಸಂಸ್ಥೆಗಳಲ್ಲಿನ ದಾಖಲೆಗಳಲ್ಲಿ ನಮೂದಿಸಿರುವಂತೆ ಇವರು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದು, ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ಸರ್ಕಾರದಿಂದ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಪಡೆದಿರುತ್ತಾರೆ. ಮತ್ತು ವಿದ್ಯಾಸಂಸ್ಥೆಗಳ ಮುಖ್ಯೋಪಾದ್ಯಾಯರು/ ಪ್ರಿನ್ಸಿಪಾಲರು ನೀಡಿರುವ ದೃಢೀಕರಣ ಪತ್ರಗಳಲ್ಲಿ ಕೆ.ಸರಸ್ವತಿ ಯವರು 'ನಯಾಡಿ' (Nayadi) ಜಾತಿಗೆ ಸೇರಿದ್ದಾರೆಂದು ದೃಢೀಕರಿಸಿದ್ದಾರೆ. ಈ ಎಲ್ಲಾ ಕಾರಣಗಳಿಂದ ಶ್ರೀಮತಿ ಕೆ.ಸರಸ್ವತಿ ಪರಿಶಿಷ್ಟ ಜಾತಿಗೆ ಸೇರಿದವರೆಂದು ನಿರ್ಣಯಿಸಿದೆ.

iv) ಶ್ರೀಮತಿ ಕೆ.ಸರಸ್ವತಿ ಮತ್ತು ಇವರ ತಂದೆ–ತಾಯಿಯವರು ಸುಮಾರು 40 ವರ್ಷಗಳಿಂದ ಬೆಂಗಳೂರಿನಲ್ಲಿಯೆ ನೆಲೆಸಿದ್ದು, ಇವರು ಪೂರ್ತಿ ವಿದ್ಯಾಭ್ಯಾಸ ಬೆಂಗಳೂರಿನಲ್ಲಿಯೇ ಮಾಡಿರುವುದರಿಂದ ಆರ್.ಪಿ. ಆಕ್ಟ್ 1950ರ ಕಲಂ 20(1), 20(1–ಎ) ಮತ್ತು 20(7) ರಲ್ಲಿ ವ್ಯಾಖ್ಯಾನಿಸಿರುವಂತೆ, ಇವರು ಕರ್ನಾಟಕ ರಾಜ್ಯದ ಸಾಮಾನ್ಯ ನಿವಾಸಿಗಳಾಗಿರುತ್ತಾರೆ. (Ordinarily resident). ಹಾಗೂ ಮೇಲಿನ ಕಂಡಿಕೆ 4(ಉ) ರಲ್ಲಿ ಉಲ್ಲೇಖಿಸಿರುವ ಸರ್ಕಾರದ ಅಧಿಸೂಚನೆಗಳಂತೆ ನಯಾಡ್/ನಯಾಡಿ ಜಾತಿಯು ಕರ್ನಾಟಕದಲ್ಲಿನ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಕ್ರಮಸಂಖ್ಯೆ:84 ರಲ್ಲಿ ಸೇರಿರುತ್ತದೆ. ಆದ್ದರಿಂದ ಕರ್ನಾಟಕದಲ್ಲಿ ಸಾಮಾನ್ಯ ನಿವಾಸಿಯಾದ ಕೆ.ಸರಸ್ವತಿಯವರು ಕರ್ನಾಟಕದ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿರುವ 'ನಯಾಡಿ' ಜಾತಿಗೆ ಸೇರಿದವರೆಂದು ಘೋಷಣಾ ಪತ್ರ ನೀಡುವ ಮೂಲಕ, ಬೆಂಗಳೂರು ದಕ್ಷಿಣ ತಾಲ್ಲೂಕು, ತಹಶೀಲ್ದಾರ್‌ರಿಂದ ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು ಪಡೆದಿರುತ್ತಾರೆಂದು ನಿರ್ಣಯಿಸಿದೆ.

ಆದರೆ, ನಯಾಡ್/ ನಯಾಡಿ ಜಾತಿಯು ಒರಿಸ್ಸಾ ರಾಜ್ಯದಲ್ಲಿ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಸೇರಿರುವುದಿಲ್ಲವಾದ್ದರಿಂದ, ಕೆ.ಸರಸ್ವತಿಯವರ ತಂದೆಯವರು ಮೂಲತಃ ಒರಿಸ್ಸಾ ರಾಜ್ಯದ ಕಟಕ್ ಜಿಲ್ಲೆಯವರಾದ್ದರಿಂದ ಅವರು ಕರ್ನಾಟಕ ರಾಜ್ಯಕ್ಕೆ ಸುಮಾರು 40 ವರ್ಷಗಳ ಹಿಂದೆಯೆ ಬಂದು ನೆಲಸಿದ್ದು, ಒರಿಸ್ಸಾ ರಾಜ್ಯದ ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಸೇರದಿರುವ ನಯಾಡಿ ಜಾತಿಗೆ ಸೇರಿದವರೆಂದು ಘೋಷಣಾ ಪತ್ರ ನೀಡಿ, ಕರ್ನಾಟಕದಲ್ಲಿನ ಬೆಂಗಳೂರು ದಕ್ಷಿಣ ತಾಲ್ಲೂಕು, ತಹಶೀಲ್ದಾರ್ ರವರಿಂದ ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು ಪಡೆದಿರುವುದು ಪ್ರಶ್ನಾರ್ಹವಾಗಿದೆ.

ಆದರೆ, ಈ ಪ್ರಕರಣದಲ್ಲಿನ ಅಂಶಗಳನ್ನೇ ಹೋಲುವ ಮತ್ತೊಂದು ಪ್ರಕರಣ ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದ ಮುಂದೆ ಬಂದು ಆದೇಶವಾಗಿರುವುದನ್ನು ಮೇಲೆ ಕಂಡಿಕೆ 4(ಊ) ರಲ್ಲಿ ಉಲ್ಲೇಖಿಸಿದೆ. ಸರ್ವೋಚ್ಚ ನ್ಯಾಯಾಲಯದಲ್ಲಿ ಸಿವಿಲ್ ಅಪೀಲು ನಂ.1387/91 ರಲ್ಲಿ ಭಾರತ ಸರ್ಕಾರ ವಿರುದ್ಧ ದೂದನಾಥ್ ಪ್ರಸಾದ್ ಪ್ರಕರಣದಲ್ಲಿ, ಪ್ರತಿವಾದಿಯ ತಂದೆ–ತಾಯಿ ಮೂಲತಃ ಬಿಹಾರ್ ರಾಜ್ಯದವರಾಗಿದ್ದು ಅಲ್ಲಿ ಅವರಿಗೆ ಸ್ವಲ್ಪ ಜಮೀನು ಸಹಾ ಇದ್ದು ಇವರು

'ಮುನಿಯಾ' ಜಾತಿಗೆ ಸೇರಿದ್ದು, ಪ್ರತಿವಾದಿಯು ಪದವಿ ಪರೀಕ್ಷೆಯವರೆಗೆ ಪೂರ್ಣ ವಿದ್ಯಾಭ್ಯಾಸವನ್ನು ಬಿಹಾರ್ ರಾಜ್ಯದಲ್ಲಿಯೆ ಮುಗಿಸಿ ಆನಂತರ ಪ್ರತಿವಾದಿ ಮತ್ತು ತಂದೆ ತಾಯಿಯವರು ಪಶ್ಚಿಮ ಬಂಗಾಳ ರಾಜ್ಯಕ್ಕೆ ಹೋಗಿ ಅಲ್ಲಿ ಸುಮಾರು 30 ವರ್ಷ ಕಾಲ ನೆಲಸಿದ್ದು, ಪ್ರತಿವಾದಿಯು ಪಶ್ಚಿಮ ಬಂಗಾಳ ರಾಜ್ಯದ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಸೇರಿರುವ 'ಮುನಿಯಾ' ಜಾತಿಗೆ ಸೇರಿದವರೆಂದು ದಾಖಲೆಗಳನ್ನು ಒದಗಿಸುವ ಮೂಲಕ ಆ ರಾಜ್ಯದಲ್ಲಿ ಪರಿಶಿಷ್ಟ ಜಾತಿ ಪ್ರಮಾಣಪತ್ರವನ್ನು ಪಡೆದು ಇದರ ಆಧಾರದ ಮೇಲೆ ಪಶ್ಚಿಮ ಬಂಗಾಳ ರಾಜ್ಯದಲ್ಲಿ ಕೇಂದ್ರ ಸರ್ಕಾರದ ಇಲಾಖೆ–ಕಂಟ್ರೋಲರ್ ಅಂಡ್ ಆಡಿಟರ್ ಜನರಲ್ ರವರ ಕಛೇರಿಯಲ್ಲಿ ಪರಿಶಿಷ್ಟ ಜಾತಿಯ ಮೀಸಲು ಹುದ್ದೆಗೆ ನೇಮಕವಾಗಿರುತ್ತಾರೆ. ಆನಂತರದ ಅವಧಿಯಲ್ಲಿ ಪ್ರತಿವಾದಿಯು ಈ ರೀತಿ ಪಡೆದಿರುವ ಪರಿಶಿಷ್ಟ ಜಾತಿ ಪ್ರಮಾಣ ಪತ್ರದ ಸಿಂಧುತ್ವವನ್ನು ಪ್ರಶ್ನಿಸಿ ಭಾರತ ಸರ್ಕಾರವು ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿದಾಗ "ಗೌರವಾನ್ವಿತ ನ್ಯಾಯಾಲಯವು ಮುನಿಯಾ ಜಾತಿಯು ಬಿಹಾರ್ ರಾಜ್ಯದಲ್ಲಿನ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಸೇರಿರುವುದಿಲ್ಲ ನಿಜ, ಆದರೆ, ಈ ಜಾತಿಯು ಪಶ್ಚಿಮ ಬಂಗಾಳ ರಾಜ್ಯದ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಸೇರಿದೆ. ಅಲ್ಲದೆ ಪ್ರತಿವಾದಿ ಮತ್ತು ಇವರ ತಂದೆ ತಾಯಿಯವರು ಮೂಲತಃ ಬಿಹಾರ್ ರಾಜ್ಯದವರಾಗಿದ್ದರೂ ಸಹಾ ಸುಮಾರು 30 ವರ್ಷಗಳಿಂದ ಇಲ್ಲಿ ನೆಲಸಿದ್ದು, ಕಂಡಿಕೆ 4ರಲ್ಲಿ ಚರ್ಚಿಸಿರುವಂತೆ, ಇವರು ಪಶ್ಚಿಮ ಬಂಗಾಳ ರಾಜ್ಯದಲ್ಲಿನ ಸಾಮಾನ್ಯ ನಿವಾಸಿಗಳಾಗಿದ್ದು, ಆ ರಾಜ್ಯದಲ್ಲಿನ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ 'ಮುನಿಯಾ' ಜಾತಿ ಸೇರಿರುವುದರಿಂದ, ಈ ಜಾತಿಗೆ ಸಂಬಂಧಿಸಿದಂತೆ, ಪ್ರತಿವಾದಿಯು ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು ಪಡೆದು ಪರಿಶಿಷ್ಟ ಜಾತಿಯ ಮೀಸಲು ಹುದ್ದೆಗೆ ನೇಮಕಗೊಂಡಿರುವುದು ಸರಿಯಾಗಿದೆ ಎಂದು ಎತ್ತಿ ಹಿಡಿದಿದ್ದಾರೆ" ಪ್ರಸ್ತುತ ಕೆ.ಸರಸ್ವತಿ ಇವರ ಪ್ರಕರಣದಲ್ಲಿನ ಅಂಶಗಳು ಸಹಾ ಸಂಪೂರ್ಣವಾಗಿ ಮೇಲ್ಕಂಡ ಸರ್ವೋಚ್ಚ ನ್ಯಾಯಾಲಯದ ಪ್ರಕರಣದಲ್ಲಿನ ಅಂಶಗಳಿಗೆ ಹೋಲಿಕೆ ಸಾಮ್ಯ ಇರುವುದರಿಂದ, ಅಂದರೆ ಈಕೆಯು ಹುಟ್ಟಿದ ಲಾಗಾಯ್ತು ಇಲ್ಲಿಯವರೆಗೆ ಸತತವಾಗಿ ಸುಮಾರು 40 ವರ್ಷಗಳ ಕಾಲ ಕರ್ನಾಟಕದಲ್ಲಿಯೇ ಸಾಮಾನ್ಯ ನಿವಾಸಿಯಾಗಿದ್ದು, ಇಲ್ಲಿಯೆ ವಿದ್ಯಾಭ್ಯಾಸವನ್ನು ಮಾಡಿರುವುದರಿಂದ, ನಯಾಡಿ ಜಾತಿಯು ಕರ್ನಾಟಕ ರಾಜ್ಯದ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಸೇರಿರುವುದರಿಂದ, ಸುಮಾರು 16 ವರ್ಷಗಳ ಕಾಲ ಇಲಾಖೆಯಲ್ಲಿ ಸೇವೆ ಸಲ್ಲಿಸಿರುವುದರಿಂದ ಮತ್ತು ಇವರಿಗೆ ಇಬ್ಬರು ಗಂಡು ಮಕ್ಕಳು ಇರುವುದರಿಂದ ಸ್ವಾಭಾವಿಕ ನ್ಯಾಯದ ಹಿತದೃಷ್ಟಿಯಿಂದ, ಮೇಲ್ಕಂಡ ಪ್ರಕರಣದಲ್ಲಿ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯ ನೀಡಿರುವ ತೀರ್ಪಿನ ತತ್ವಗಳನ್ನೇ (Principles) ಈ ಪ್ರಕರಣದಲ್ಲಿ ಅನ್ವಯಿಸುವ ಮೂಲಕ ಶ್ರೀಮತಿ ಕೆ.ಸರಸ್ವತಿ ಇವರು ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು ದಿನಾಂಕ:17.08.1990 ರಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ತಹಶೀಲ್ದಾರ್ ರಿಂದ ಪಡೆದಿರುವುದು ಕ್ರಮಬದ್ಧವಾಗಿದೆ ಎಂದು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮತ್ತು ಉಲ್ಲೇಖಿಸಿದ ನಿರ್ಣಯಗಳ ಅಡಿಯಲ್ಲಿ ಶ್ರೀಮತಿ ಕೆ.ಸರಸ್ವತಿ ಬಿನ್ ಕೆ.ಸಮಲ್, ನಂ.255/1, ಪಾಪಣ್ಣ ರಸ್ತೆ, ಅಶ್ವಥನಗರ, ಥಣಿಸಂದ್ರ ಮುಖ್ಯರಸ್ತೆ, ಬೆಂಗಳೂರು ಇವರಿಗೆ ಈ ಕಛೇರಿಯಿಂದ ದಿನಾಂಕ:17.08.1990ರಲ್ಲಿ ಸಂಖ್ಯೆ: ಎಂಎನ್‌ಸಿ 1074/90–91 ರಂತೆ ನೀಡಲಾಗಿದ್ದ (ನಯಾಡಿ) ಪರಿಶಿಷ್ಟ ಜಾತಿ ಪ್ರಮಾಣ ಪತ್ರವು ಕ್ರಮಬದ್ಧವಾಗಿದೆ ಎಂದು ಈ ಮೂಲಕ ಆದೇಶಿಸಿದೆ. ಆದ್ದರಿಂದ ಈ ಕಛೇರಿ ಸಂಖ್ಯೆ: ಎಂಎನ್‌ಸಿ ಸಿಆರ್ 8/2008–09 ದಿನಾಂಕ:13.10.2008 ರಂತೆ ಶ್ರೀಮತಿ ಕೆ.ಸರಸ್ವತಿ ಬಿನ್ ಕೆ.ಸಮಲ್ ಇವರಿಗೆ ಈ ಕಛೇರಿಯಿಂದ ದಿನಾಂಕ:17.08.1990 ರಲ್ಲಿ ನೀಡಲಾಗಿದ್ದ ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು "ರದ್ದುಪಡಿಸಿ ಹೊರಡಿಸಲಾಗಿದ್ದ ಆದೇಶವನ್ನು" ಈ ಮೂಲಕ ಹಿಂತೆಗೆದುಕೊಂಡಿದೆ.

ತಹಶೀಲ್ದಾರ್,
ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು.

ಪಿ.ಆರ್.825

**ಕಾರ್ಮಿಕ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಾಇ 7 ಇಟಿಎಕ್ಸ್ 2007, ಬೆಂಗಳೂರು, ದಿನಾಂಕ:26ನೇ ಆಗಸ್ಟ್, 2009**

ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದ ಉದ್ಯೋಗಾಧಿಕಾರಿ ವೃಂದದ ಅಧಿಕಾರಿಗಳ ದಿನಾಂಕ:01.01.2007ರಲ್ಲಿದ್ದಂತೆ ಕರಡು ಜೇಷ್ಠತಾ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: ಕಾಇ 07 ಇಟಿಎಕ್ಸ್ 2007, ದಿನಾಂಕ:29.06.2007 ರಲ್ಲಿ ಪ್ರಕಟಿಸಲಾಗಿತ್ತು. ತತ್ಸಂಬಂಧದಲ್ಲಿ ಸ್ವೀಕರಿಸಲಾದ ಎಲ್ಲಾ ಆಕ್ಷೇಪಣೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಮೂಲಭೂತವಾಗಿ ವ್ಯಕ್ತಗೊಂಡ ನ್ಯೂನ್ಯತೆಗಳನ್ನು ಸಂಬಂಧಿಸಿದ ನಿಯಮಾವಳಿ ಹಾಗೂ ದಾಖಲೆಗಳ ಆಧಾರದಂತೆ ಪರಿಶೀಲಿಸಿದ್ದು, ಅಂತಿಮ ಜೇಷ್ಠತಾ ಪಟ್ಟಿಯನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ. ಈ ಜೇಷ್ಠತಾ ಪಟ್ಟಿಯನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿ/ ನ್ಯಾಯಾಲಯದಲ್ಲಿ ಯಾವುದಾದರೂ ಪ್ರಕರಣವಿದ್ದಲ್ಲಿ ಆ ತೀರ್ಪಿಗೆ ಬದ್ಧವಾಗುವ ಷರತ್ತಿಗೊಳಪಟ್ಟು ಪ್ರಕಟಿಸಲಾಗಿದೆ.

**ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದ ಉದ್ಯೋಗಾಧಿಕಾರಿಗಳ ವೃಂದದ ಅಧಿಕಾರಿಗಳ ಜೇಷ್ಠತಾ ಪಟ್ಟಿ ದಿನಾಂಕ:01.01.2007ರಂತೆ**

| ಕ್ರ. ಸಂ. | ಹಿಂದಿನ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ | ಹೆಸರು ಪೋಷಕ ವೃಂದದ ಜೇಷ್ಠತಾ ಸಂಖ್ಯೆ ಶ್ರೀ/ಶ್ರೀಮತಿ | ನೇರ ನೇಮಕಾತಿ/ ಮುಂಬಡ್ತಿ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ/ ನೇಮಕಾತಿ ಹೊಂದಿದ ದಿನಾಂಕ | ಷರಾ |
|---|---|---|---|---|---|---|---|
| 1. | 6 | ಹೆಚ್. ಹೊನ್ನಪ್ಪ | ನೇ.ನೇ. | 10.7.53 | 28.2.80 | 28.2.80 | |
| 2. | 16 | ಟಿ.ಆರ್. ವೀರಣ್ಣ | ನೇ.ನೇ. | 26.2.54 | 13.10.86 | 13.10.86 | |
| 3. | 17 | ಮೈಲಾರಯ್ಯ | ನೇ.ನೇ. | 19.1.61 | 9.10.86 | 9.10.86 | |
| 4. | 18 | ವಿ.ವೇಣುಗೋಪಾಲ | ನೇ.ನೇ. | 1.6.59 | 10.10.86 | 10.10.86 | |
| 5. | 20 | ಎಸ್.ಎಸ್. ಮಾಲಗತ್ತಿ (ಪ.ಜಾ.) | ನೇ.ನೇ. | 11.8.60 | 8.10.86 | 8.10.86 | |
| 6. | 23 | ಕೆ.ಬಿ.ಸಿದ್ದಲಿಂಗಯ್ಯ | ನೇ.ನೇ. | 16.1.56 | 4.7.91 | 4.7.91 | |
| 7. | 25 | ಸಿ.ವಿಶ್ವನಾಥ (ಪ.ಜಾ.) | ನೇ.ನೇ. | 15.3.58 | 8.7.91 | 8.7.91 | |
| 8. | 26 | ವಿ.ಕೆ.ಧನರಾಜ್ (ಪ.ಜಾ.) | ನೇ.ನೇ. | 18.1.56 | 28.10.93 | 28.10.93 | |
| 9. | 27 | ಬಿ.ಹೆಚ್. ಗುಂಡಳ್ಳಿ (ಪ.ಜಾ.) 96 | ಮುಂ. | 4.3.52 | 5.5.78 | 5.7.95 | |
| 10. | 28 | ದೊಡ್ಡನರಸೇಗೌಡ 86 | ಮುಂ. | 13.6.53 | 5.5.78 | 20.12.96 | |
| 11. | 29 | ಎಂ.ಬಿ. ತಿಮ್ಮೇಗೌಡ 87 | ಮುಂ. | 20.3.55 | 5.5.78 | 3.3.97 | |
| 12. | 30 | ಸಾಧನಾ ಅಶೋಕ ಪೋಟೆ | ನೇ.ನೇ. | 25.7.68 | 29.5.97 | 29.5.97 | |
| 13. | 31 | ಡಿ. ರವಿಕುಮಾರ್ | ನೇ.ನೇ. | 24.2.60 | 7.7.97 | 7.7.97 | |
| 14. | 32 | ಅಲ್ಲಾಭಕ್ಷ್ | ನೇ.ನೇ. | 20.6.64 | 26.5.97 | 26.5.97 | |
| 15. | 33 | ಎಸ್.ಡಿ. ಬಸವರಾಜು | ನೇ.ನೇ. | 18.4.63 | 19.5.97 | 19.5.97 | |
| 16. | 34 | ಅನಿಲ್ ಭೂಪಾಲ್ ಕರನಿಂಗ್ (ಪ.ಜಾ.) | ನೇ.ನೇ. | 5.1.67 | 2.6.97 | 2.6.97 | |
| 17. | 36 | ಕೆ.ಎಂ. ಮಲ್ಲಿಕಾರ್ಜುನಪ್ಪ | ನೇ.ನೇ. | 25.6.60 | 26.5.97 | 26.5.97 | |
| 18. | 37 | ಕೆ.ಟಿ.ರಾಮ ಮೋಹನ | ನೇ.ನೇ. | 30.8.55 | 22.5.97 | 22.5.97 | |
| 19. | – | ಎಸ್.ಜೆ. ಹೇಮಚಂದ್ರ (ಪ.ಜಾ.) | ನೇ.ನೇ. | 14.2.74 | 17.12.99 | 17.12.99 | |
| 20. | – | ಡಿ.ಎಂ.ರಾಣಿ (ಪ.ಜಾ.) | ನೇ.ನೇ. | 1.7.72 | 20.12.99 | 20.12.99 | |
| 21. | – | ಶ್ರೀನಿವಾಸ ಕೆ. | ನೇ.ನೇ. | 29.4.72 | 17.5.06 | 17.05.06 | ಕರ್ನಾಟಕ ಲೋಕಸೇವಾ ಆಯೋಗವು ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಆಯ್ಕೆ ಮಾಡಿದ ಅಭ್ಯರ್ಥಿಗಳನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 21 ಇಟಿಎಕ್ಸ್ 2006, ದಿ:15.5.06 ಹಾಗೂ ಕಾಇ |
| 22. | – | ರುದ್ರಣ್ಣಗೌಡ ಜಿ.ಜೆ. | ನೇ.ನೇ. | 10.2.74 | 17.5.06 | 17.05.06 | |
| 23. | – | ಮಂಜುನಾಥ ಬಿ. | ನೇ.ನೇ. | 26.10.65 | 19.5.06 | 19.5.06 | |
| 24. | – | ಜಗನ್ನಾಥ ಸಿ. | ನೇ.ನೇ. | 26.10.71 | 26.5.06 | 26.5.06 | |
| 25. | – | ತನುಜ ಸದಾಶಿವ ರಾಂಪುರೆ | ನೇ.ನೇ. | 4.11.69 | 17.5.06 | 17.5.06 | |
| 26. | – | ಖಲಂದರ್ ಖಾನ್ | ನೇ.ನೇ. | 18.4.75 | 30.5.06 | 30.5.06 | |
| 27. | – | ವಿಜಯಲಕ್ಷ್ಮಿ ಜೆ.ಬಿ. | ನೇ.ನೇ. | 18.7.76 | 17.5.06 | 17.5.06 | |

| | | | | | | | |
|---|---|---|---|---|---|---|---|
| 28. | – | ಹಟ್ಟಪ್ಪ ಪಿ.ಎಸ್. | ನೇ.ನೇ. | 16.5.72 | 17.5.06 | 17.5.06 | 117 ಇಟಿಎಕ್ಸ್ 2005, ದಿ:16.2.06 ರನ್ವಯ ನೇಮಿಸಲಾಗಿದೆ. |
| 29. | – | ಉಮಾ ಸಿ.ಎಂ. | ನೇ.ನೇ. | 2.7.64 | 17.5.06 | 17.5.06 | |
| 30. | – | ಮಂಜುನಾಥ ಕೆ.ಡಿ. | ನೇ.ನೇ. | 13.6.71 | 1.3.06 | 1.3.06 | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್.835 ಪೀಠಾಧಿಕಾರಿ,

ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ರಾಯಚೂರು

**ಸಂ: ಎ5/ಅಗುಪ್ರ/71ಎ ಪ್ರಕರಣ/ಪಿಎಸ್ಐ/ಇತ್ಯರ್ಥ/ಸಿಆರ್–214/05/2008–09, ದಿನಾಂಕ:30ನೇ ಮಾರ್ಚ್, 2009**

**ನಿರೂಪಣಾಧಿಕಾರಿಗಳು:** ಶ್ರೀಮತಿ ಎ.ರಾಧಾದೇವಿ, ಭಾ.ಆ.ಸೇ.
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪಅರಣ್ಯ ಸಂರಕ್ಷಣಾಧಿಕಾರಿಗಳು, ರಾಯಚೂರು ಅರಣ್ಯವಿಭಾಗ, ರಾಯಚೂರು.

**ಪಿರ್ಯಾಧಿದಾರರು:** ವಲಯ ಅರಣ್ಯ ಅಧಿಕಾರಿ, ರಾಯಚೂರು ವಲಯ, ರಾಯಚೂರು.

**ಪ್ರಸ್ತಾವನೆ:**

ದಿನಾಂಕ:30.09.2005 ರಂದು ಬೆಳಗಿನ ಜಾವ 4.30 ಗಂಟೆಗೆ ರಾಯಚೂರಿನ ಸದರ ಬಜಾರ ಪೊಲೀಸ್ ಠಾಣೆ ಆರಕ್ಷಕ ಉಪ ನಿರೀಕ್ಷಕ ಹಾಗೂ ಸಿಬ್ಬಂದಿಯವರು ಪೆಟ್ರೋಲಿಂಗ್ ಮಾಡುವ ಕಾಲಕ್ಕೆ ರಾಯಚೂರು ಜಿಲ್ಲಾಧಿಕಾರಿಗಳ ಕಛೇರಿ ಹತ್ತಿರ ನಿಂತಿರುವ ಎರಡು ಟಾಟಾ ಸುಮೊ ಕೆಎ–31/ಎಂ/669 ಹಾಗೂ ಕೆಎ18/ಎನ್ 2104 ವಾಹನಗಳನ್ನು ಪರಿಶೀಲಿಸಿ ವಿಚಾರಿಸುವ ಸಂದರ್ಭದಲ್ಲಿ ಎರಡು ವಾಹನ ಚಾಲಕರ ಪೈಕಿ ಒಬ್ಬ ವಾಹನ ಚಾಲಕ ಪರಾರಿಯಾದಾಗ ಇನ್ನೊಂದು ವಾಹನದ ಚಾಲಕ ಶ್ರೀ ಸಿಕಂದರಖಾನ್ ತಂದೆ ಉಸ್ಮಾನ್‌ಖಾನ್ ಸಾ:ಸಣ್ಣ ಜಂಬೂರು ಈತನನ್ನು ದಸ್ತಗಿರಿಗೆ ತೆಗೆದುಕೊಂಡು ವಿಚಾರಿಸಲಾಗಿ, ಸದರಿ ವಾಹನಗಳಲ್ಲಿ ಶಿವಮೊಗ್ಗ ಜಿಲ್ಲೆಯ ಅರಣ್ಯ ಪ್ರದೇಶದಿಂದ ಸುಮಾರು 6 ಕ್ವಿಂಟಾಲ್ ತೂಕದ ಶ್ರೀಗಂಧದ ಕಟ್ಟಿಗೆಯನ್ನು ಇಲಾಖೆ ಅನುಮತಿ ಇಲ್ಲದೆ ಅನಧಿಕೃತವಾಗಿ ಸಾಗಣೆ ಮಾಡುತ್ತಿರುವುದಾಗಿ ತಿಳಿಸಿರುತ್ತಾನೆ. ಆಗ ಕರ್ನಾಟಕ ಅರಣ್ಯ ಅಧಿನಿಯಮ ಕಲಂ 86, 87 ಮತ್ತು 379 ಐಪಿಸಿ ಪ್ರಕಾರ ಗುನ್ನೆ ಪ್ರಕರಣ ಸಂಖ್ಯೆ: 214/2005 ದಾಖಲು ಮಾಡಿಕೊಂಡು ಜಪ್ತು ಮಾಡಲಾದ (ಸುಮಾರು 6.08 ಕ್ವಿಂಟಾಲ್) ಶ್ರೀಗಂಧದ ಕಟ್ಟಿಗೆ ಹಾಗೂ ವಾಹನಗಳ ಬಗ್ಗೆ ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಯಚೂರು ಇವರಿಗೆ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಕಾಸೂ) ಸದರ್ ಬಜಾರ ಠಾಣೆ ಇವರು ಅವರ ಕಛೇರಿ ಪತ್ರದ ದಿನಾಂಕ:19.10.2005 (Annexure-1)ರ ವರದಿಯಲ್ಲಿ ವಿವರಿಸಿ, ಮಾನ್ಯ ನ್ಯಾಯಾಲಯವು ಪರವಾನಿಗೆ ನೀಡಿದ ಪ್ರಕಾರ ಸದರಿ ವಾಹನಗಳನ್ನು ಹಾಗೂ ಮುದ್ದೆ ಮಾಲನ್ನು ಅರಣ್ಯ ಇಲಾಖೆ ಸ್ವಾಧೀನಕ್ಕೆ ಪಡೆದುಕೊಳ್ಳುವಂತೆ ಕೋರಿರುತ್ತಾರೆ. ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಯಚೂರು ರವರ ನಿರ್ದೇಶನ ಮೇರೆಗೆ ದಿನಾಂಕ:19.10.2005 ರಂದು ವಲಯ ಅರಣ್ಯ ಅಧಿಕಾರಿಗಳು, ರಾಯಚೂರು ಇವರು ಸದರಿ ಶ್ರೀಗಂಧದ (17 ಚೀಲಗಳಲ್ಲಿ ಪುಡಿಗಂಧ ಮತ್ತು 103 ತುಂಡುಗಳು ಜಪ್ತುಪಡಿಸಿದ ಮಾಲನ್ನು ಸ್ವಾಧೀನಕ್ಕೆ ತೆಗೆದುಕೊಂಡಿರುತ್ತಾರೆ. (Annexure-2), ದಿನಾಂಕ:21.10.2005 ರಂದು ಸದರಿ ಪ್ರಕರಣದಲ್ಲಿ ಜಪ್ತು ಮಾಡಿರುವ ವಾಹನ ಸಂಖ್ಯೆ: ಕೆಎ31/ಎಂ/669 ಹಾಗೂ ಕೆಎ18/ಎನ್2104 ಗಳನ್ನು ಆರಕ್ಷಕ ಉಪ ನಿರೀಕ್ಷಕ (ಆವಿ) ಸದರಿ ಬಜಾರ ಠಾಣೆ ರಾಯಚೂರು ಇವರ ಪತ್ರ ಸಂಖ್ಯೆ: ಸಿನಂ.214, ಅಪರಾಧ.ಸಬರಾ, 2005, ದಿನಾಂಕ:21.10.2005 (Annexure-3) ರ ಪ್ರಕಾರ ವಾಹನಗಳನ್ನು ಸ್ವಾಧೀನಕ್ಕೆ ಪಡೆದುಕೊಳ್ಳಲು ಕೋರಿರುವ ಪ್ರಯುಕ್ತ ಸದರಿ ವಾಹನಗಳನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವಂತೆ ವಲಯ ಅರಣ್ಯ ಅಧಿಕಾರಿಗಳು, ರಾಯಚೂರು ಇವರಿಗೆ ಸೂಚಿಸಲಾಯಿತು. ಅದರ ಪ್ರಕಾರ ಸದರಿ ವಾಹನಗಳನ್ನು ದಿನಾಂಕ:25.10.2005 ರಂದು ಸ್ವಾಧೀನಕ್ಕೆ ತೆಗೆದುಕೊಂಡು ಈ ಕಛೇರಿಗೆ ವಲಯ ಅರಣ್ಯ ಅಧಿಕಾರಿಗಳು, ರಾಯಚೂರು ಇವರು ವರದಿ ಮಾಡಿರುತ್ತಾರೆ(Annexure-4)

ದಿನಾಂಕ:01.12.2005ರ ಈ ಕಛೇರಿ ಪತ್ರದಲ್ಲಿ ಸದರಿ ಜಪ್ತು ಮಾಡಲಾದ ವಾಹನಗಳ ನೋಂದಣಿ ಮತ್ತು ಮಾಲೀಕತ್ವದ ಬಗ್ಗೆ ವಿವರಗಳನ್ನು ಒದಗಿಸುವಂತೆ ರಾಯಚೂರು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಲಾಗಿತ್ತು (Annexure-5), ಅದೇ ರೀತಿ ದಿನಾಂಕ:02.12.2005ರ ಈ ಕಛೇರಿ ಪತ್ರದಲ್ಲಿ ಸದರಿ ಜಪ್ತು ಮಾಡಲಾದ ವಾಹನಗಳ ನೊಂದಣಿ ಮತ್ತು ಮಾಲೀಕತ್ವದ ಬಗ್ಗೆ ವಿವರಗಳನ್ನು ಒದಗಿಸುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿರಸಿ ಹಾಗೂ ಚಿಕ್ಕಮಗಳೂರು ಇವರಿಗೆ ಕೋರಲಾಗಿತ್ತು. (Annexure-6), ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿರಸಿ ಇವರು ಕೆಎ31/ಎಂ669 ವಾಹನದ ಬಗ್ಗೆ ಮಾಹಿತಿ ನೀಡುತ್ತಾ ಸದರಿ ವಾಹನವು 04.10.1995 ರಲ್ಲಿ ನೊಂದಣಿಯಾಗಿದ್ದು ಶ್ರೀ ಮದನ.ಕೆ. ಬೇಡೆಕರ್ ಅಲಿಯಾಸ್ ಕೃಷ್ಣ, ರಾಮದೇವ ಗಲ್ಲಿ, ಹಳಿಯಾಳ ಇವರ ಮಾಲಿಕತ್ವವಿದ್ದು, ದಿನಾಂಕ:29.09.1997 ರಂದು ಕಾರವಾರ ಆರ್‌ಟಿಓ ಗೆ ತೀರುವಳಿ ಪತ್ರ ನೀಡಿರುತ್ತಾರೆ. (Annexure-7), ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರ ಪತ್ರ ದಿನಾಂಕ:03.05.2006ರಲ್ಲಿ ಕೆಎ18/ಎನ್2104 ವಾಹನವು ಅವರ ಕಛೇರಿಯಲ್ಲಿ ನೊಂದಣಿಯಾಗಿರುವುದಿಲ್ಲವೆಂದು

ತಿಳಿಸಿರುತ್ತಾರೆ. (Annexure-8). ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಾರವಾರ ಇವರು ದಿನಾಂಕ:07.06.2006ರ ಪತ್ರದಲ್ಲಿ ಕೆಎ31/ಎಂ/669 ವಾಹನದ ಬಗ್ಗೆ ವಿವರ ನೀಡುತ್ತಾ, ಸದರಿ ವಾಹನವು ಶ್ರೀ ರಾಜೇಂದ್ರ ಎನ್. ನಾಯ್ಕ್ ತಂದೆ ನಾಗಪ್ಪ ಸಾ॥ ಕಾನ್ಸಿಗಡ್ಡೆ, ಅಂಕೋಲಾ, ಇವರ ಹೆಸರಿನಲ್ಲಿ ಹೊಸದಾಗಿ ನೊಂದಣಿಯಾಗಿದ್ದು ಸದರಿ ವಾಹನಕ್ಕೆ ಆರ್‌ಟಿಓ ಶಿವಮೊಗ್ಗ ದಿನಾಂಕ:21.07.2005ರಲ್ಲಿ ತೀರುವಳಿ ನೀಡಲಾಗಿದೆ ಎಂದು ವರದಿ ಮಾಡಿರುತ್ತಾರೆ (Annexure-9). ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರ ಕಛೇರಿ ಪತ್ರ ದಿನಾಂಕ:08.06.2006ರಲ್ಲಿ ವರದಿ ಮಾಡುತ್ತಾ ವಾಹನ ಸಂಖ್ಯೆ: ಕೆಎ31/ಎಂ669 ವು ಸದರಿಯವರ ಕಛೇರಿಯಲ್ಲಿ ನೊಂದಣಿಯಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ (Annexure-10) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿರಸಿ ಇವರು ಕೆಎ31/ಎಂ–669 ವಾಹನದ ಬಗ್ಗೆ ಮಾಹಿತಿ ನೀಡುತ್ತಾ ಸದರಿ ವಾಹನವು 04.10.1995ರಲ್ಲಿ ನೊಂದಣಿಯಾಗಿದ್ದು ದಿನಾಂಕ:04.10.1995 ರಿಂದ 29.09.1997 ರವರೆಗೆ ಶ್ರೀ ಮದನ ಕೆ. ಬೇಡೆಕರ್ ಅಲಿಯಾಸ್ ಕೃಷ್ಣ, ರಾಮದೇವ ಗಲ್ಲಿ, ಹಳಿಯಾಳ ಇವರ ಮಾಲೀಕತ್ವದಲ್ಲಿದೆ ಎಂದು ದಿನಾಂಕ:17.07.2006 ರಂದು ವರದಿ ನೀಡಿರುತ್ತಾರೆ. (Annexure-11). ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಾರವಾರ ಇವರು ದಿನಾಂಕ:18.07.2006 ರ ಪತ್ರದಲ್ಲಿ ವಾಹನ ಕೆಎ31/ಎಂ669ರ ಮಾಲೀಕರಾದ ಶ್ರೀ ರಾಜೇಂದ್ರ ನಾಗಪ್ಪ ನಾಯ್ಕ್ ಇವರಿಂದ ದಿನಾಂಕ:21.07.2005 ರಂದು ವಾಹನದ ಮಾಲೀಕತ್ವ ಶ್ರೀ ಜಿ. ಸುರೇಶ ತಂದೆ ಗಿಡ್ಡ ನಾಯ್ಕ ಸಾ॥ ನಿಟ್ಟೂರು ಪೊ॥ ಅಂಚದಕಟ್ಟೆ, ತಾ॥ ತೀರ್ಥಹಳ್ಳಿ ಇವರ ಹೆಸರಿನಲ್ಲಿ ವರ್ಗಾವಣೆ ಮಾಡಿ ಕ್ಲೀಯರೆನ್ಸ್ ಪಡೆದುಕೊಳ್ಳಲಾಗಿದೆ ಎಂದು ವರದಿ ಮಾಡಿರುತ್ತಾರೆ (Annexure-12).

ಜಪ್ತು ಮಾಡಲಾದ ವಾಹನ ಸಂಖ್ಯೆ: ಕೆಎ31/ಎಂ–669 ರ ಮಾಲೀಕತ್ವದ ಬಗ್ಗೆ ಹಕ್ಕು ಪ್ರತಿಪಾದಿಸಲು ಶ್ರೀ ಎನ್.ಜಿ. ಸುರೇಶ ತಂದೆ ಗಿಡ್ಡ ನಾಯ್ಕ, ಸಾ: ನಿಟ್ಟೂರು, ಪೋ:ಹಂಚದ ಕಟ್ಟೆ, ತಾ: ತೀರ್ಥಹಳ್ಳಿ ಜಿಲ್ಲಾ: ಶಿವಮೊಗ್ಗ ಹಾಗೂ ಶ್ರೀ ರಾಜೇಂದ್ರ ನಾಗಪ್ಪ ನಾಯಕ ತಂದೆ ನಾಗಪ್ಪ ಸಾ: ಕಾನ್ಸಿಗಡ್ಡೆ ತಾ: ಅಂಕೋಲಾ, ಜಿಲ್ಲಾ: ಕಾರವಾರ ಇವರಿಗೆ (ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಾರವಾರ ಇವರ ವರದಿಯ ಪ್ರಕಾರ) ಕೆಎಫ್‌ಎ 1993ರ ಸೆಕ್ಷನ್ 71ಬಿ ಅಡಿಯಲ್ಲಿ ದಿನಾಂಕ:24.07.2006 ರಂದು ಅಧಿಕೃತ ಅಧಿಕಾರಿಯವರು ಕಾರಣ ಕೇಳುವ ನೋಟಿಸ್ ಜಾರಿ ಮಾಡಲಾಗಿದೆ (Annexure-13,14). ಅದಕ್ಕೆ ಸದರಿಯವರಿಂದ ಯಾವುದೇ ಉತ್ತರ ತಲುಪಿರುವುದಿಲ್ಲ.

ಜಪ್ತು ಮಾಡಲಾದ ವಾಹನ ಸಂಖ್ಯೆ: ಕೆಎ–31 ಎಂ–669, ಕೆಎ–18 ಎನ್–2104 ವಾಹನಗಳಿಗೆ ಸಂಬಂಧಿಸಿದಂತೆ, ಮಾಲೀಕತ್ವದ ಹಕ್ಕು ಪ್ರತಿಪಾದಿಸಲು ಮಾಲೀಕರು ಅಥವಾ ವಾರಸುದಾರರು ಯಾರಾದರೂ ಇದ್ದಲ್ಲಿ ಅವರ ವಾಹನದ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು 30 ದಿನಗಳೊಳಗಾಗಿ ಅಧಿಕೃತ ಅಧಿಕಾರಿಯವರಿಗೆ ಸಲ್ಲಿಸುವಂತೆ ದಿನಾಂಕ:07.09.2006ರ ಕರ್ನಾಟಕ ರಾಜ್ಯಪತ್ರದಲ್ಲಿ ಅಧಿಸೂಚನೆ ಪ್ರಕಟಿಸಲಾಯಿತು. (ಅಧಿಸೂಚನೆ ಪ್ರಕಟಿಸಿದ ದಿನಾಂಕ:07.09.2006 ರಿಂದ 30 ದಿನಗಳು) ಆದರೆ ಇದರಿಂದ ಯಾವುದೇ ಪ್ರಯೋಜನವಾಗಲಿಲ್ಲ. ಯಾರೊಬ್ಬರು ಸದರಿ ವಾಹನಗಳ ಮಾಲೀಕತ್ವದ ಬಗ್ಗೆ ಯಾವುದೇ ದಾಖಲಾತಿಗಳನ್ನು ನಿಗದಿತ ಅವಧಿಯೊಳಗೆ ಯಾರೂ ಸಲ್ಲಿಸಿರುವುದಿಲ್ಲ (Annexure-15). ಸದರಿ ವಾಹನಗಳ ವಿಷಯದ ಬಗ್ಗೆ ದಿನಾಂಕ:26.09.2006ರ ಕನ್ನಡ ಪ್ರಭ ದಿನಪತ್ರಿಕೆಯಲ್ಲಿ ಹಾಗೂ ದಿನಾಂಕ:24.09.2006ರ The New Sunday Express (The Indian Express) ದಿನಪತ್ರಿಕೆಯಲ್ಲಿ ಪ್ರಕಟಿಸಲಾಯಿತು (Annexure-16, 17). ಆಗ ಕೂಡ ಯಾರೊಬ್ಬರಿಂದಲೂ ಪ್ರತಿಕ್ರಿಯೆ ವ್ಯಕ್ತವಾಗಲಿಲ್ಲ.

ಈ ಮೇಲಿನ ಎಲ್ಲಾ ಪ್ರಯತ್ನಗಳಿಂದಲೂ ಕೆಎ31–ಎಂ–669 ಹಾಗೂ ಕೆಎ–18–ಎನ್–2104 ವಾಹನಗಳು ಹಾಗೂ ಶ್ರೀಗಂಧದ ಮಾಲೀಕತ್ವದ ಬಗ್ಗೆ ಸಂಬಂಧಪಟ್ಟ ಯಾರಿಂದಲೂ ಪ್ರತಿಕ್ರಿಯೆ ಬಾರದಿರುವುದರಿಂದ ಕೆಎಫ್‌ಎ 1963 ನಿಯಮ 71ಬಿ ಅಡಿಯಲ್ಲಿ ಅಧಿಕೃತ ಅಧಿಕಾರಿಯವರು ವಿಚಾರಣೆ ಜರುಗಿಸುವ ನಿರ್ಧಾರ ಕೈಗೊಳ್ಳಲಾಯಿತು. ಆ ದಿಶೆಯಲ್ಲಿ ಈ ಕಛೇರಿ ಪತ್ರ ದಿನಾಂಕ:30.03.2007ರ ಪತ್ರದಲ್ಲಿ ಆರಕ್ಷಕ ಉಪ ನಿರೀಕ್ಷಕರು (ಆವಿ), ಸದರ ಬಜಾರ ಪೋಲೀಸ್ ಠಾಣೆ, ರಾಯಚೂರು ಇವರಿಂದ ಗುನ್ನೆ ಪ್ರಕರಣ ಸಿಆರ್.214/2005 ಪ್ರಕರಣದ ದಾಖಲಾತಿಗಳ ದೃಢೀಕೃತ ಪ್ರತಿ ಸಲ್ಲಿಸುವಂತೆ ಕೋರಲಾಯಿತು (Annexure-18). ದಿನಾಂಕ:18.05.2007 ರಂದು ಸದರಿ ದೃಢೀಕೃತ ದಾಖಲಾತಿಗಳನ್ನು ಅವರಿಂದ ಪಡೆಯಲಾಯಿತು.

ಸದರ ಬಜಾರ್ ಪೊಲೀಸ್ ಠಾಣೆ, ರಾಯಚೂರು ಎಫ್‌ಐಆರ್ ನಂ.0214/30.09.2005ರ ಪ್ರಕಾರ ಶ್ರೀ ಸಿಕಂದರ್ ಖಾನ್ ತಂದೆ ಉಸ್ಮಾನ್ ಖಾನ್ ಸಾ: ಚಿಕ್ಕಜಂಬೂರ ತಾ: ಶಿಕಾರಿಪುರ ಜಿಲ್ಲಾ: ಶಿವಮೊಗ್ಗ ಹಾಗೂ ಶ್ರೀ ಮೋಹನ್ ತಂದೆ ಚಿದಂಬರ್‌ರಾವ್ ಗೋಪಾಲಗೌಡ ನಗರ, ಸಾಗರ ಜಿಲ್ಲಾ: ಶಿವಮೊಗ್ಗ ಇವರು ಅನಧಿಕೃತವಾಗಿ ಶ್ರೀಗಂಧದ ಕಟ್ಟಿಗೆಗಳನ್ನು Tata Sumo KA31 M-669 (White Colour) ಹಾಗೂ KA-18 N-2104 Tata Sumo (White Colour) ವಾಹನಗಳಲ್ಲಿ ಸಾಗಿಸುತ್ತಿದ್ದಾಗ ವಾಹನಗಳ ಜಪ್ತು ಮಾಡಿ, ಜಪ್ತು ಮಾಡಲಾದ ವಾಹನಗಳ ಹಾಗೂ ಮುದ್ದೆಮಾಲಿನ ಬಗ್ಗೆ ಕೆಎಫ್‌ಎ 1963, ಸೆಕ್ಷನ್ 71ಬಿ ಪ್ರಕಾರ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ವಿವರಿಸಿ, ಅದಕ್ಕೆ ನಿಮಗೆ ಏನಾದರೂ ಆಕ್ಷೇಪಣೆ ಇದ್ದಲ್ಲಿ ಲಿಖಿತ ರೂಪದಲ್ಲಿ 15 ದಿನಗಳೊಳಗಾಗಿ ಸಲ್ಲಿಸುವಂತೆ ದಿನಾಂಕ:31.07.2007ರ ಈ ಕಛೇರಿ ಪತ್ರದಲ್ಲಿ ನೋಟೀಸ್ ಜಾರಿ ಮಾಡಲಾಯಿತು. (Annexure-18). ಅದೇ ರೀತಿಯಾಗಿ ಪುನಃ 27.10.2007ರಂದು ಮತ್ತೊಮ್ಮೆ ಸದರಿ ಆರೋಪಿತರಿಗೆ ಹಾಗೂ ವಾಹನ ಮಾಲೀಕರಿಗೆ (ಸಾರಿಗೆ ಅಧಿಕಾರಿಯವರಿಂದ ಮಾಹಿತಿ ಸಂಗ್ರಹಿಸಿದ ಪ್ರಕಾರ) ನೋಟೀಸ್ ಜಾರಿ ಮಾಡಲಾಯಿತು. (Annexure-20).

ದಿನಾಂಕ:11.01.2008ರಂದು ಸದರಿ ವಿಷಯದ ಬಗ್ಗೆ ಕೆಎಫ್‌ಎ 1963, ಸೆಕ್ಷನ್ 71ಬಿ ರಲ್ಲಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸುವಂತೆ ಕೋರಲಾಗಿ, ದಿನಾಂಕ:24.01.2008ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಯಿತು.

ಸರ್ಕಾರದ ಪರವಾಗಿ ಶ್ರೀ ಎಸ್. ಬಷೀರ್ ಅಹ್ಮದ್, ಹಿರಿಯ ಸಹಾಯಕ ಅಭಿಯೋಜಕರು, ರಾಯಚೂರು ಇವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ನ್ಯಾಯಾಲಯದಲ್ಲಿ ಜರುಗಿದ ಸದರ್ ಬಜಾರ್ ಪೊಲೀಸ್ ಠಾಣೆ ಸಿಆರ್ ನ.214/2005ರ ಶ್ರೀಗಂಧದ ಪ್ರಕರಣದ ವಿಚಾರಣೆಯಲ್ಲಿ ದಿನಾಂಕ:05.10.2007, 07.12.2007, 28.12.2007, 04.01.2008 ರಂದು ವಾದ ಮಂಡಿಸಲು ಹಾಜರಾಗಿರುತ್ತಾರೆ.

ಯಾವುದೇ ವಿಚಾರಣೆಯಲ್ಲೂ ಸದರಿ ವಾಹನಗಳ ಹಾಗೂ ಮುದ್ದೆ ಮಾಲಿನ ಬಗ್ಗೆ ಮಾಲೀಕತ್ವದ ಹಕ್ಕು ಪ್ರತಿಪಾದಿಸಲು ಯಾರೊಬ್ಬರು ಹಾಜರಾಗಲಿಲ್ಲ. ನಿಯಮಗಳನುಸಾರ ನಿಗದಿಪಡಿಸಿದ ಅವಧಿಗಳೆಲ್ಲವೂ ಮುಗಿದಿರುತ್ತವೆ.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನು ವಸ್ತುಸ್ಥಿತಿ ಲಭ್ಯವಿದ್ದ ವಿಷಯ ಸಾಮಗ್ರಿಗಳ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿವೆ.

1) Tata Sumo LMV-Omni Bus ನಂ. ಕೆಎ–31/ಎಂ–669 ಹಾಗೂ ಕೆಎ–18/ಎನ್–2104 ವಾಹನಗಳಲ್ಲಿ ಸುಮಾರು 608785 ಕೆ.ಜಿ. ಪ್ರಮಾಣದ ಶ್ರೀಗಂಧವನ್ನು ಅನಧಿಕೃತವಾಗಿ ಸಾಗಿಸಲು ಉಪಯೋಗಿಸಲಾಗಿತ್ತೆ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ನಿಯಮ ಉಲ್ಲಂಘಿಸಲಾಗಿದೆಯೇ?

2) ಕೆಎಫ್‌ಎ 71ಬಿ (i) ಪ್ರಕಾರ ವಾಹನ ಮಾಲೀಕರಿಗೆ ಕಾರಣ ಕೇಳುವ ನೋಟಿಸ್ ನೀಡಲಾಗಿದೆಯೇ?

3) ವಾಹನಗಳ ಮಾಲೀಕರು ಅಥವಾ ಕೆಲಸಗಾರರು ಅವರ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ?

4) ಪ್ರಕರಣದಲ್ಲಿ ಫಿರ್ಯಾದುದಾರರು ಅಮಾನತ್ತು ಪಡಿಸಿದ ಅರಣ್ಯ ಉತ್ಪನ್ನಗಳ ಮಾಲೀಕತ್ವ ಕರ್ನಾಟಕ ಅರಣ್ಯ ಕಾಯಿದೆಯಂತೆ ಸರ್ಕಾರಿ ಸ್ವತ್ತೆಂದು ಅಭಿಯೋಗ ರುಜುವಾತುಪಡಿಸಿದೆಯೇ?

5) ಪ್ರಕರಣದಲ್ಲಿ ಅಮಾನತ್ತುಪಡಿಸಿದ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಮೇಲಿನ ಅಂಶಗಳಿಗೆ ಈ ಕೆಳಕಂಡಂತೆ ತೀರ್ಮಾನಕ್ಕೆ ಬರಲಾಗಿದೆ.

1) ಹೌದು

2) ಹೌದು

3) ಹೌದು

4) ಹೌದು

5) ಹೌದು. ಈ ಕೆಳಗಿನ ಕಾರಣದಿಂದ ಮುಟ್ಟುಗೋಲು ಹಾಕಿಕೊಳ್ಳಬಹುದು.

ದಿನಾಂಕ:30.09.2005 ರಂದು ಬೆಳಗಿನ ಜಾವ 4–30 ಗಂಟೆಗೆ ರಾಯಚೂರು ನಗರದ ಸದರ ಬಜಾರ ಪೊಲೀಸ್ ಠಾಣೆ ಸಿಬ್ಬಂದಿಯವರು ಗಸ್ತು ಕಾರ್ಯನಿರ್ವಹಿಸುವಾಗ ರಾಯಚೂರು ಜಿಲ್ಲಾಧಿಕಾರಿಗಳ ಕಛೇರಿ ಹತ್ತಿರದ ಮುಖ್ಯ ರಸ್ತೆಯಲ್ಲಿ ನಿಂತಿರುವ ಎರಡು ಟಾಟಾ ಸುಮೋ ಕೆಎ–31/ಎಂ–669 ಹಾಗೂ ಕೆಎ–18–ಎನ್–2104 ವಾಹನಗಳನ್ನು ತಪಾಸಣೆ ಮಾಡಿದಾಗ ಅವುಗಳಲ್ಲಿ ಶ್ರೀಗಂಧವನ್ನು ಅನಧಿಕೃತವಾಗಿ ಸಾಗಾಣಿಕೆ ಮಾಡಿದ್ದಕ್ಕಾಗಿ ಕರ್ನಾಟಕ ಅರಣ್ಯ ಕಾಯ್ದೆ, 1963 ಅಡಿಯಲ್ಲಿ ಗುನ್ನೆ ಪ್ರಕರಣ ಸಂಖ್ಯೆ: 214/2005ರಲ್ಲಿ ದಾಖಲಿಸಿ ಮಾನ್ಯ ನ್ಯಾಯಾಲಯದ ಆದೇಶದ ಮೇರೆಗೆ ವಾಹನಗಳನ್ನು ಹಾಗೂ ಮುದ್ದೆ ಮಾಲನ್ನು ವಲಯ ಅರಣ್ಯ ಅಧಿಕಾರಿ, ರಾಯಚೂರು ಇವರಿಗೆ ಒಪ್ಪಿಸಲಾಯಿತು. ನಂತರ ಸದರಿ ವಾಹನಗಳ ಹಾಗೂ ಮುದ್ದೆಮಾಲಿನ ಮಾಲೀಕತ್ವದ ಬಗ್ಗೆ ಕೆಎಫ್‌ಎ 1963 ಸೆಕ್ಷನ್ 71ಬಿ ಪ್ರಕಾರ ವಿಚಾರಣೆ ನಡೆಸಲಾಗಿದೆ. ಸದರಿ ವಿಚಾರಣೆಯಲ್ಲಿ ಹಿರಿಯ ಸಹಾಯಕ ಅಭಿಯೋಜಕರು, ರಾಯಚೂರು ಇವರು ಸಾಕಷ್ಟು ಕಾಲಾವಕಾಶ ನೀಡಿದ್ದರೂ ವಾಹನಗಳ ಹಾಗೂ ಮುದ್ದೆಮಾಲಿನ ವಾರಸುದಾರರು ವಿಚಾರಣೆಗೆ ಹಾಜರಾಗದೇ ಇದ್ದುದರಿಂದ ಪ್ರಕರಣದಲ್ಲಿ ಭಾಗಿಯಾದ ವಾಹನಗಳನ್ನು ಹಾಗೂ ಮುದ್ದೆ ಮಾಲನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ವ್ಯಕ್ತಪಡಿಸಿರುವುದರಿಂದ ಅಕ್ರಮವಾಗಿ ವಾಹನಗಳಲ್ಲಿ ಶ್ರೀಗಂಧದ ತುಂಡುಗಳನ್ನು ಅರಣ್ಯ ಕಾಯ್ದೆ ಮತ್ತು ಕಾನೂನಿನ ವಿರುದ್ಧವಾಗಿ ಸಾಗಿಸಲು ಉಪಯೋಗಿಸಿದೆ ಎಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ, ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷಾಧಾರಗಳನ್ನು ಮತ್ತು ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಎ.ರಾಧಾದೇವಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಯಚೂರು ಅರಣ್ಯ ವಿಭಾಗ, ರಾಯಚೂರು ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ, 1963 ಕಲಂ 62(1), (2) ಹಾಗೂ 71ಎ (1), (2) ರ ಪ್ರಕಾರ ವಾಹನ ಸಂಖ್ಯೆ ಟಾಟಾ ಸುಮೋ ನೊಂದಣಿ ಸಂಖ್ಯೆ: ಕೆಎ–31/ಎಂ–669 (ಯಂತ್ರದ ಸಂಖ್ಯೆ ಗೋಚರಿಸುತ್ತಿಲ್ಲ, ಚಾಸ್ಸಿ ನಂ.385003 ಜೆಯುಕ್ಯೂ 921139) ಹಾಗೂ ಕೆಎ–18/ಎನ್–2104

(ಯಂತ್ರದ ಸಂಖ್ಯೆ: ಕೆಯುಕ್ಯೂ 790855, ಚಾಸ್ಸಿ ನಂ.385003 ಕೆಯುಕ್ಯೂ 924092) ಗಳನ್ನು ಹಾಗೂ ಜಪ್ತು ಮಾಡಲಾದ ಶ್ರೀಗಂಧದ ಮುದ್ದೆ ಮಾಲಿನ ಅಂದಾಜು ಪ್ರಮಾಣ 608785 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಿದ್ದರೆ ಈ ಆದೇಶ ಹೊರಡಿಸಿದ 30 ದಿವಸಗಳೊಳಗಾಗಿ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನಗಳನ್ನು ಹಾಗೂ ಅರಣ್ಯ ಉತ್ಪನ್ನವನ್ನು ಕಾನೂನು ರೀತ್ಯಾ ವಿಲೇವಾರಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಇಂದು ದಿನಾಂಕ:30ನೇ ಮಾರ್ಚ್ 2009 ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಎ. ರಾಧಾದೇವಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು, ರಾಯಚೂರು ಅರಣ್ಯ
ವಿಭಾಗ, ರಾಯಚೂರು.

ಪಿ.ಆರ್.347

## ಜಿಲ್ಲಾ ತರಬೇತಿ ಸಂಸ್ಥೆ, ಹಾಸನ

**ಮಾಹಿತಿ ಹಕ್ಕು ಕಾಯ್ದೆ–2005(ಕೇಂದ್ರ ಕಾಯ್ದೆ) ರ ಸೆಕ್ಷನ್ 4 (1) ಬಿರ ಪ್ರಕಾರ ಪ್ರಚಾರ ಪಡಿಸಲೇಬೇಕಾದ ಮಾಹಿತಿಯು ಈ ಕೆಳಕಂಡಂತಿರುತ್ತದೆ**

**1. ಹಾಸನ ಜಿಲ್ಲಾ ತರಬೇತಿ ಸಂಸ್ಥೆಯ ಸಂಘಟನೆ :**

ಪ್ರಧಾನ ಕಾರ್ಯದರ್ಶಿಗಳು–ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ಬೆಂಗಳೂರು.
ಮಹಾನಿರ್ದೇಶಕರು, ಅಡಳಿತ ತರಬೇತಿ ಸಂಸ್ಥೆ, ಮೈಸೂರು.
ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಹಾಸನ.

ಜಿಲ್ಲಾ ತರಬೇತಿ ಸಂಸ್ಥೆಯು ಜಿಲ್ಲಾಧಿಕಾರಿಗಳ ನೇತೃತ್ವದ ವ್ಯವಸ್ಥಾಪಕ ಸಮಿತಿಯ ಸಲಹೆ ಸೂಚನೆಗಳಂತೆ ತರಬೇತಿ ಚಟುವಟಿಕೆಗಳನ್ನು ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಲಾಗುತ್ತದೆ.

**2. ಸಂಸ್ಥೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳು :**

1) ಜಿಲ್ಲಾ ತರಬೇತಿ ಸಂಸ್ಥೆಯು ಸರ್ಕಾರಿ ನೌಕರರ ವೃತ್ತಿ ದಕ್ಷತೆಯನ್ನು ಹೆಚ್ಚಿಸುವ ಮತ್ತು ಸಾರ್ವಜನಿಕರ ಬಗ್ಗೆ ಉತ್ತಮ ಮನೋಬಾವ ಮೂಡಿಸುವ ತರಬೇತಿ ಶಿಬಿರಗಳನ್ನು ಏರ್ಪಡಿಸುತ್ತದೆ.

2) ವಿವಿಧ ಇಲಾಖೆಯ ಲಿಪಿಕ ನೌಕರರಿಗೆ ಗ್ರಾಮಲೆಕ್ಕಿಗರಿಗೆ ಮತ್ತು ಗ್ರಾಮ ಪಂಚಾಯಿತಿ ಕಾರ್ಯದರ್ಶಿಗಳಿಗೆ ವೃತ್ತಿ ಬುನಾದಿ ತರಬೇತಿಯನ್ನು ಪುನರ್ ಮನನ ಮತ್ತು ವಿಷಯಾಧಾರಿತ ಸಂಕ್ಷಿಪ್ತ ತರಬೇತಿಯನ್ನು ಏರ್ಪಡಿಸುತ್ತದೆ.

3) ಬಟವಾಡೆ ಅಧಿಕಾರಿಗಳಿಗೆ ಕಛೇರಿ ಮೇಲ್ವಿಚಾರಕರಿಗೆ ವೃತ್ತಿ ಕೌಶಲ್ಯವನ್ನು ಹೆಚ್ಚಿಸುವ ತರಬೇತಿಗಳನ್ನು ನಡೆಸಲಾಗುತ್ತದೆ.

4) ಸ್ಥಳದಲ್ಲೇ ತರಬೇತಿಯನ್ನು ಏರ್ಪಡಿಸಿ ಕಾರ್ಯದಕ್ಷತೆಯನ್ನು ಹೆಚ್ಚಿಸಲು ನೆರವಾಗುತ್ತದೆ.

5) ಕಂಪ್ಯೂಟರ್ ತರಬೇತಿಯನ್ನು ನೀಡಿ ಸಾರ್ವಜನಿಕರಿಗೆ ಇನ್ನೂ ಉತ್ತಮ ಸೇವೆ ಮಾಡಲು ನೆರವಾಗುವುದು.

6) ಮುನಿಸಿಪಲ್ ನೌಕರರಿಗೆ ವೃತ್ತಿ ದಕ್ಷತೆಯನ್ನು ಹೆಚ್ಚಿಸಲು ತರಬೇತಿ ಏರ್ಪಾಟು ಮಾಡುವುದು.

7) ಗ್ರಾಮ ಪಂಚಾಯಿತಿ ಸದಸ್ಯರಿಗೆ ಮತ್ತು ಇತರ ಅಧಿಕಾರಿಗಳಿಗೆ ಸಿಬ್ಬಂದಿಗೆ ಉಪಗ್ರಹ ಆಧಾರಿತ ತರಬೇತಿಯನ್ನು ಏರ್ಪಡಿಸುವುದು.

8) ಇಲಾಖೆಗಳು ಸೂಚಿಸುವ ವಿಶೇಷ ತರಬೇತಿ ಕಾರ್ಯಕ್ರಮಗಳನ್ನು ಏರ್ಪಾಟು ಮಾಡುವುದು,

9) ನುರಿತ ಸಂಪನ್ಮೂಲ ವ್ಯಕ್ತಿಗಳಿಂದ ವಿಶೇಷ ಉಪನ್ಯಾಸಗಳನ್ನು ಏರ್ಪಡಿಸಲಾಗುತ್ತದೆ.

10) ಆಡಳಿತಾತ್ಮಕ ಮತ್ತು ಹಣಕಾಸಿಗೆ ಸಂಬಂಧಿಸಿದಂತೆ ಸಲಹೆ ಸೂಚನೆಗಳನ್ನು ನೀಡುವುದು,

**3. ಅಧಿಕಾರಿಗಳು : ನೌಕರರ ಅಧಿಕಾರಿಗಳು ಮತ್ತು ಕರ್ತವ್ಯಗಳು:**

1) ಪ್ರಾಚಾರ್ಯರು: ಸಂಸ್ಥೆಯ ಮುಖ್ಯಸ್ಥರು.

ಅ) ಸಂಸ್ಥೆಯ ಸಂಪೂರ್ಣ ಆಡಳಿತ ಜವಾಬ್ದಾರಿ ಇವರದ್ದಾಗಿರುತ್ತದೆ.

ಆ) ತರಬೇತಿ ಕಾರ್ಯಕ್ರಮಗಳನ್ನು ಏರ್ಪಡಿಸುವುದು, ಉಪನ್ಯಾಸ ನೀಡುವುದು ಇವರ ಕರ್ತವ್ಯವಾಗಿರುತ್ತದೆ,

ಇ) ಶಿಕ್ಷಣಾರ್ಥಿಗಳು ಮತ್ತು ಸಾರ್ವಜನಿಕರಿಗೆ ಸ್ಪಂದಿಸುವುದು ಇವರ ಕರ್ತವ್ಯವಾಗಿರುತ್ತದೆ.

ಈ) ಸಿಬ್ಬಂದಿಯ ನಿಯಂತ್ರಣ ಇವರ ಜವಾಬ್ದಾರಿಯಾಗಿರುತ್ತದೆ,

**2. ಉಪ ಪ್ರಾಚಾರ್ಯರು:**

ಅ) ಪ್ರಾಚಾರ್ಯರು ಇಲ್ಲದಿರುವಾಗ ಪ್ರಭಾರಿ ಪ್ರಾಚಾರ್ಯರಾಗಿ ಕರ್ತವ್ಯ ನಿರ್ವಹಿಸುವುದು.

ಆ) ತರಬೇತಿ ಶಿಬಿರಗಳನ್ನು ನಡೆಸುವುದು ಮತ್ತು ಉಪನ್ಯಾಸ ನೀಡುವುದು ಇವರ ಕರ್ತವ್ಯವಾಗಿರುತ್ತದೆ.

ಇ) ತರಬೇತಿ ಶಿಬಿರಗಳಿಗೆ ಸಂಬಂಧಿಸಿದಂತೆ ಟಿಪ್ಪಣಿಗಳನ್ನು ಸಿ.ಡಿ.ಗಳನ್ನು ತಯಾರು ಮಾಡುವುದು.

ಈ) ಕಛೇರಿ ಮುಖ್ಯಸ್ಥರು ವಹಿಸುವ ಇತರೆ ಕೆಲಸಗಳನ್ನು ನಿರ್ವಹಿಸುವುದು.

**3. ಬೋಧಕರು:**

1) ತರಬೇತಿ ಶಿಬಿರಗಳನ್ನು ನಡೆಸುವುದು ಮತ್ತು ಉಪನ್ಯಾಸ ನೀಡುವುದು ಇವರ ಕರ್ತವ್ಯವಾಗಿರುತ್ತದೆ,

2) ಉಪ ಪ್ರಾಚಾರ್ಯರು ಇಲ್ಲದಿರುವಾಗ ಹಿರಿಯ ಬೋಧಕರು ಉಪ ಪ್ರಾಚಾರ್ಯರ ಕಾರ್ಯವನ್ನು ನಿರ್ವಹಿಸುವುದು.

3) ತರಬೇತಿ ಶಿಬಿರಗಳಿಗೆ ಸಂಬಂಧಿಸಿದಂತೆ ಟಿಪ್ಪಣಿಗಳನ್ನು ಸಿ.ಡಿ.ಗಳನ್ನು ತಯಾರು ಮಾಡುವುದು.

4) ಪ್ರಾಯೋಗಿಕ ಅಧಿಕಾರಿಗಳಿಗೆ ಪೂರಕ ಮಾಹಿತಿಯನ್ನು ತಯಾರಿಸುವುದು.

5) ಸದರಿಯಂತೆ ವಸತಿ ನಿಲಯದ ಮತ್ತು ಗ್ರಂಥಾಲಯದ ಪ್ರಭಾರವನ್ನು ನಿರ್ವಹಿಸುವುದು.

6) ಕಛೇರಿ ಮುಖ್ಯಸ್ಥರು ವಹಿಸುವ ಇತರೆ ಯಾವುದೇ ಕಾರ್ಯವನ್ನು ನಿರ್ವಹಿಸುವುದು.

**4. ಕಛೇರಿ ಸಿಬ್ಬಂದಿ:**

**1. ಪ್ರಥಮ ದರ್ಜೆ ಸಹಾಯಕರು:ಒಬ್ಬರು.**

ಸಿಬ್ಬಂದಿ ಶಾಖೆ, ನಗದು ಶಾಖೆ, ಲೆಕ್ಕಪತ್ರ ಶಾಖೆ, ಆಯವ್ಯಯ ಶಾಖೆ ಮತ್ತು ಕಛೇರಿ ಮುಖ್ಯಸ್ಥರು ವಹಿಸುವ ಇತರೆ ಯಾವುದೇ ಕಾರ್ಯಗಳನ್ನು ನಿರ್ವಹಿಸುವುದು.

**2. ದ್ವಿತೀಯ ದರ್ಜೆ ಸಹಾಯಕರು: ಒಬ್ಬರು.**

ತರಬೇತಿ ಶಾಖೆ **"**ಟಪಾಲು ನಿರ್ವಹಣೆ ಅಂಚೆ ಚೀಟಿ ನಿರ್ವಹಣೆ**"** ಅಭಿಲೇಖಾಲಯ ಮತ್ತು ಕಛೇರಿ ಮುಖ್ಯಸ್ಥರು ವಹಿಸುವ ಇತರೆ ಯಾವುದೇ ಕಾರ್ಯಗಳನ್ನು ನಿರ್ವಹಿಸುವುದು.

**3. ಬೆರಳಚ್ಚುಗಾರರು: ಇಬ್ಬರು.**

ಬೆರಳಚ್ಚು ಶಾಖೆಯ ಕರ್ತವ್ಯಗಳು.

**4. "ಡಿ" ದರ್ಜೆ ನೌಕರರು : ಮೂವರು**

ಸಂಸ್ಥೆಯ ಸ್ವಚ್ಛತೆಯನ್ನು ನಿರ್ವಹಿಸುವುದು, ಖಜಾನೆ ಬ್ಯಾಂಕ್ ಕೆಲಸ ನಿರ್ವಹಿಸುವುದು. ಟಪಾಲನ್ನು ರವಾನಿಸುವುದು. ಕಛೇರಿ ಮುಖ್ಯಸ್ಥರು: ಉಪ ಪ್ರಾಚಾರ್ಯರು: ಬೋಧಕರು ಮತ್ತು ಸಿಬ್ಬಂದಿ ಹೇಳುವ ಕೆಲಸವನ್ನು ನಿರ್ವಹಿಸುವುದು.

**ತೀರ್ಮಾನ ತೆಗೆದುಕೊಳ್ಳುವಲ್ಲಿ ಮೇಲ್ವಿಚಾರಣೆಯಲ್ಲಿ ಮತ್ತು ಬದ್ಧತೆಯಲ್ಲಿ ಅನುಸರಿಸಬೇಕಾದ ವಿಧಾನ ಕುರಿತು.**
ಮೇಲ್ವಿಚಾರಣೆ ಮತ್ತು ಬದ್ದತೆ ಈ ಕೆಳಕಂಡ ನಾಲ್ಕು ಹಂತಗಳಲ್ಲಿ ನಡೆಯುತ್ತದೆ.

1) ಕರ್ನಾಟಕ ಸರ್ಕಾರ(ಸಿಆಸುಇ–ಆಸು)ಬೆಂಗಳೂರು.
2) ಮಹಾನಿರ್ದೇಶಕರು_ಆಡಳಿತ ತರಬೇತಿ ಸಂಸ್ಥೆ, ಮೈಸೂರು.
3) ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿನ ವ್ಯವಸ್ಥಾಪಕ ಸಮಿತಿ ಸಭೆ–ಹಾಸನ.
4) ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ,ಹಾಸನ.

**ಕಾರ್ಯನಿರ್ವಹಿಸಲು ಸಂಸ್ಥೆ ರೂಪಿಸಿರುವ ಗುಣಮಟ್ಟ**

(**1**) ಸಂಸ್ಥೆಯು ಮಾನ್ಯ ಜಿಲ್ಲಾಧಿಕಾರಿಗಳ ನೇತೃತ್ವದ ವ್ಯವಸ್ಥಾಪಕ ಸಮಿತಿಯ ಮಾರ್ಗದರ್ಶನದಂತೆ ಅಧಿಕಾರಿಗಳು ನೌಕರರಿಗೆ ಉತ್ತಮವಾದ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುವುದು.

1) ವ್ಯವಸ್ಥಾಪಕ ಸಮಿತಿಯು ಮೂರು ತಿಂಗಳಿಗೊಮ್ಮೆ ಸಭೆ, ನಡೆಸಿ ಸಂಸ್ಥೆಯ ಕಾರ್ಯದಕ್ಷತೆಯನ್ನು ಮತ್ತು ಗುಣಮಟ್ಟವನ್ನು ಪರಿಶೀಲಿಸಿ ಸೂಕ್ತ ಮಾರ್ಗದರ್ಶನಗಳನ್ನು ನೀಡುತ್ತಿರುತ್ತದೆ.
2) ಶಿಕ್ಷಣಾರ್ಥಿಗಳಿಗೆ ಅನುಕೂಲವಾಗುವಂತಹ ಉತ್ತಮ ಗ್ರಂಥಾಲಯವನ್ನು ಮತ್ತು ವಸತಿ ನಿಲಯವನ್ನು ಒದಗಿಸುವುದು.
3) ಸಂಸ್ಥೆಯ ಅಡಳಿತಕ್ಕೂ ಮತ್ತು ತರಬೇತಿಗೂ ಗಣಕಯಂತ್ರಗಳನ್ನು ಉಪಯೋಗಿಸಲಾಗುತ್ತಿದೆ.
4) ಬೋಧಕರು ದಕ್ಷತೆಯನ್ನು ಹೆಚ್ಚಿಸುವ ಸಲುವಾಗಿ ಅವರನ್ನು ಉನ್ನತ ತರಬೇತಿಗೆ ನಿಯೋಜಿಸಲಾಗುವುದು.
5) ಬೋಧಕರ ಕಾರ್ಯದಕ್ಷತೆಯ ಮನವರಿಕೆಗಾಗಿ ಸ್ಥಳದಲ್ಲೇ ತರಬೇತಿಯನ್ನು ಏರ್ಪಡಿಸಲಾಗುವುದು.
6) ಗುಣಮಟ್ಟದ ತರಬೇತಿಯನ್ನು ನೀಡಲು ಉಪಗ್ರಹ ಆಧಾರಿತ ತರಬೇತಿಗಳನ್ನು ಹಮ್ಮಿಕೊಳ್ಳಲಾಗುವುದು.

7) ಶಿಕ್ಷಣಾರ್ಥಿಗಳ ವೃತ್ತಿ ದಕ್ಷತೆಯನ್ನು ಹೆಚ್ಚಿಸಲು ಮತ್ತು ಮನೋವೃತ್ತಿಯನ್ನು ಮಾರ್ಪಾಡಿಸಲು ಅಧ್ಯಯನ ಪ್ರವಾಸಗಳನ್ನು ಕಛೇರಿ ಭೇಟಿಯನ್ನು ಮತ್ತು ನೇರ ಪಾಲ್ಗೊಳ್ಳುವಿಕೆ ವಿಧಾನವನ್ನು ಅಳವಡಿಸುವುದು.
8) ಉತ್ತಮ ಉಪನ್ಯಾಸದ ಟಿಪ್ಪಣಿಗಳನ್ನು ನೀಡಲು ಜೆರಾಕ್ಸ್ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ.
9) ನೈಪುಣ್ಯತೆ ಹೆಚ್ಚಿಸುವ, ಮನೋವೃತ್ತಿಯನ್ನು ಬದಲಿಸುವ ಉತ್ತಮ ತೀರ್ಮಾನಗಳನ್ನು ಕೈಗೊಳ್ಳುವ ಬಗ್ಗೆ ಕುಶಲತೆ ಆಟಗಳನ್ನು ಏರ್ಪಾಟು ಮಾಡುವುದು.

**ಸಂಸ್ಥೆಯು ಉಪಯೋಗಿಸುವ ನಿರ್ವಹಿಸಿರುವ ನಿಯಮಾವಳಿಗಳು**

1) ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958.
2) ಕರ್ನಾಟಕ ಆರ್ಥಿಕ ಸಂಹಿತೆ 1958 ಸಂಪುಟ 1 ಮತ್ತು 2.
3) ಸಾದಿಲ್ವಾರು ವೆಚ್ಚದ ಕೈಪಿಡಿ
4) ಕರ್ನಾಟಕ ಖಜಾನೆ ಸಂಹಿತೆ
5) ಆರ್ಥಿಕ ಅಧಿಕಾರಿಗಳ ಪ್ರತ್ಯಾಯೋಜನೆ ಕೈಪಿಡಿ.
6) ಕೆ.ಸಿ.ಎಸ್. (ಶಿಸ್ತು) ನಿಯಮಾವಳಿ.
7) ಕೆ.ಸಿ.ಎಸ್. (ನಡತೆ) ನಿಯಮಾವಳಿ
8) ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ) ನಿಯಮಾವಳಿ
9) ಕೆ.ಸಿ.ಎಸ್.ಪ್ರೊಬೇಷನ್‌ನಿಯಮಗಳು
10) ಕರ್ನಾಟಕ ಸರ್ಕಾರಿ ನೌಕರರ ವೈದ್ಯಕೀಯ ನಿಯಮಗಳು 1969.
11) ಮಾಹಿತಿ ಹಕ್ಕು ಅಧಿನಿಯಮ 2005.
12) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 2000.
13) ಕರ್ನಾಟಕ ಲೋಕಾಯುಕ್ತ ಕಾಯ್ದೆ
14) ಲಂಚನಿರೋಧ ಕಾಯ್ದೆ
15) ಭಾರತ ಸಂವಿಧಾನ 1951
16) ಕಛೇರಿ ಕಾರ್ಯವಿಧಾನ ಕೈಪಿಡಿ
17) ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು
18) ಕರ್ನಾಟಕ ಕಡ್ಡಾಯ ವಿಮಾ ನಿಯಮಗಳು
19) ಗುಂಪು ವಿಮಾ ಯೋಜನೆ ನಿಯಮಗಳು
20) ಕನ್ನಡ ಭಾಷಾ ಮತ್ತು ಇಲಾಖೆ ಪರೀಕ್ಷೆ ನಿಯಮಗಳು
21) ಮಾಹಿತಿ ಹಕ್ಕು ಅಧಿನಿಯಮ 2005.

**ದಸ್ತಾವೇಜುಗಳ ವರ್ಗೀಕರಣ:**

1) ಸೇವಾ ವಿಷಯಗಳ ದಸ್ತಾವೇಜುಗಳು
2) ಲೆಕ್ಕಪತ್ರಗಳ ದಸ್ತಾವೇಜುಗಳು
3) ಎಲೆಕ್ಟ್ರಾನಿಕ್: ಎಲೆಕ್ಟ್ರಿಕ್ ಉಪಕರಣಗಳ ದಸ್ತಾವೇಜುಗಳು
4) ತರಬೇತಿ ವಿಭಾಗದ ದಸ್ತಾವೇಜುಗಳು
5) ನೀತಿ ನಿರೂಪಣೆಯಲ್ಲಿ ಸಾರ್ವಜನಿಕರು ಭಾಗವಹಿಸುವ ಬಗ್ಗೆ.

ಇರುವುದಿಲ್ಲ.

**ಸಲಹೆ ಸೂಚನೆಗಳನ್ನು ನೀಡಲು ಸಮಿತಿಗಳು**

1) ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿನ ಜಿಲ್ಲಾ ತರಬೇತಿ ಸಂಸ್ಥೆಯ ವ್ಯವಸ್ಥಾಪಕ ಸಮಿತಿ ರಚನೆಯಾಗಿರುತ್ತದೆ.
2) ಮೂರು ತಿಂಗಳಿಗೊಮ್ಮೆ ಸಮಿತಿ ಸಭೆಯು ನಡೆಯುತ್ತದೆ.
3) ಕೇವಲ ಅಧಿಕಾರಿಗಳು ಮಾತ್ರ ಸದಸ್ಯರಾಗಿರುತ್ತಾರೆ.
4) ಸಾರ್ವಜನಿಕರು ಬಯಸಿದಲ್ಲಿ ಸಭಾ ನಡವಳಿಗಳ ಪ್ರತಿಯನ್ನು ನೀಡಲಾಗುವುದು.

**ಸಂಸ್ಥೆಯ ಅಧಿಕಾರಿಗಳ: ನೌಕರರ ಮಾಹಿತಿ ಪುಸ್ತಕ – ತಯಾರಿಸಿ ಇಡಲಾಗಿದೆ.**

| ಕ್ರಮ ಸಂಖ್ಯೆ | ಹೆಸರು ಶ್ರೀ/ಶ್ರೀಮತಿ | ಹುದ್ದೆ | ಮಾಸಿಕ ವೇತನ | ಷರಾ |
|---|---|---|---|---|
| 1. | ಶ್ರೀ ಎನ್.ಎಸ್.ಚಂದ್ರಶೇಖರ್ | ಪ್ರಾಚಾರ್ಯರು | ರೂ.26,766–00 | |
| 2. | ಉಪ ಪ್ರಾಚಾರ್ಯರು | ಖಾಲಿ | | |
| 3. | ಸಿ.ಆರ್. ಪದ್ಮ | ಬೋಧಕರು | ರೂ.22,852–00 | |

| ಕ್ರಮ ಸಂಖ್ಯೆ | ಹೆಸರು ಶ್ರೀ/ಶ್ರೀಮತಿ | ಹುದ್ದೆ | ಮಾಸಿಕ ವೇತನ | ಷರಾ |
|---|---|---|---|---|
| 4. | ಈ. ದಯಾನಂದ | ದ್ವಿ.ದ.ಸ. | ರೂ.9,902-00 | ಶ್ರೀ.ಈ.ದಯಾನಂದ, ದ್ವಿ.ದ.ಸ. ಇವರು ದಿ: 17.07.09 ರಂದು ಅಪರಾಹ್ನ ಕರ್ತವ್ಯದಿಂದ ಬಿಡುಗಡೆ ಹೊಂದಿದ್ದು ಇವರ ಸ್ಥಾನಕ್ಕೆ ಶ್ರೀ.ವಿ.ಆರ್.ಲೋಕೇಶ ರವರು ದಿ:17.07.09 ರಂದು ಪೂರ್ವಾಹ್ನ ಕರ್ತವ್ಯದ ಮೇಲೆ ಹಾಜರಾಗಿರುತ್ತಾರೆ. |
| 5. | ಬಿ.ಕೆ. ನಾಗರತ್ನ | ಬೆರಳಚ್ಚುಗಾರ್ತಿ | ರೂ.8,295-00 | |
| 6. | ಮಾವಿನಕೆರೆ ಗೌಡ | ಗ್ರೂಪ್ 'ಡಿ' | ರೂ.9,379-00 | |
| 7. | ಪುಟ್ಟಸ್ವಾಮಿ | ಗ್ರೂಪ್ 'ಡಿ' | ರೂ.8,670-00 | |
| 8. | ಹುದ್ದೆ ಖಾಲಿ ಇದೆ | ಬೋಧಕರು | ರೂ. | |
| 9. | ಹುದ್ದೆ ಖಾಲಿ ಇದೆ | ಪ್ರ.ದ.ಸ. | ರೂ. | |
| 10. | ಹುದ್ದೆ ಖಾಲಿ ಇದೆ | ಬೆರಳಚ್ಚುಗಾರರು | ರೂ. | |
| 11. | ಹುದ್ದೆ ಖಾಲಿ ಇದೆ | ಗ್ರೂಪ್ 'ಡಿ' | ರೂ. | |

**ಆಯವ್ಯಯ 2009-10**

| ಲೆಕ್ಕ ಶೀರ್ಷಿಕೆ | ಉಪ ಶೀರ್ಷಿಕೆ | ಮೊಬಲಗು |
|---|---|---|
| 2070-00-003-3-02 | 1. 002 - ಅಧಿಕಾರಿಗಳ ವೇತನ | 1,20,000-00 |
| | 2 003 - ಸಿಬ್ಬಂದಿ ವೇತನ | 2,62,500-00 |
| | 3 011 - ತುಟ್ಟಿಭತ್ಯೆ | 1,45,000-00 |
| | 4 014 - ಇತರೆ ಭತ್ಯೆ | 47,500-00 |
| | 5 020 - ವೈದ್ಯಕೀಯ ಭತ್ಯೆ | 1,000-00 |
| | 6 041 - ಪ್ರಯಾಣ ವೆಚ್ಚಗಳು | 4,000-00 |
| | 7 051 - ಸಾಮಾನ್ಯ ವೆಚ್ಚಗಳು | 2,75,000-00 |
| | 8 071 - ಕಟ್ಟಡ ವೆಚ್ಚಗಳು | 25,000-00 |
| | **ಒಟ್ಟು ರೂ.** | **8,80,000-00** |

ಸಬ್ಸಿಡಿ ಯೋಜನೆಗಳು ಯಾವುದೇ ಯೋಜನೆಗಳ ಅನುಷ್ಠಾನ ಈ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವುದಿಲ್ಲ. ರಿಯಾಯಿತಿಗಳು:ಅನುಮತಿಗಳು ಯಾವುದೂ ಇರುವುದಿಲ್ಲ.

ಪ್ಲಾಪಿ: ಡಿಸ್ಕ್ ರೂಪದಲ್ಲಿ ದೊರೆಯುವ ಮಾಹಿತಿ.

ಈ ಕೆಳಕಂಡ ಯೋಜನೆಗಳ ಕುರಿತು ಮಾಹಿತಿಯು ಪ್ಲಾಪಿಯಲ್ಲಿ ದೊರೆಯುವುದು.

1) ಬಾಲ ಕಾರ್ಮಿಕ ಪದ್ಧತಿ ಬಗ್ಗೆ.
2) ತಬರನ ಕಥೆ- ಮಾಹಿತಿ ಒದಗಿಸುವ ಕುರಿತು
3) ಮಾಹಿತಿ ಹಕ್ಕು-ಪಂಚಾಯಿತಿಯಲ್ಲಿ ಅನುಷ್ಠಾನ
4) ಪ್ರಾಕೃತಿಕ ವಿಕೋಪ ನಿರ್ವಹಣೆ.

ಮಾಹಿತಿ ಪಡೆಯುವ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆ ವಿವರಗಳು.

1) ಸಂಸ್ಥೆಯ ಪ್ರಾಚಾರ್ಯರು ಮಾಹಿತಿ ನೀಡಲು ಸಕ್ಷಮ ಪ್ರಾಧಿಕಾರಿಯಾಗಿರುತ್ತಾರೆ.
2) ಮಾಹಿತಿ ಕೋರಿ ಬರುವ ಅರ್ಜಿಗಳನ್ನು ಸ್ವೀಕರಿಸಿ, ಸ್ವೀಕೃತಿಯನ್ನು ನೀಡಿ ನಿಗದಿತ ಸಮಯದಲ್ಲಿ ಮಾಹಿತಿ ಕೊಡುವ ಏರ್ಪಾಟು ಮಾಡಿದೆ.
3) ನಿಗದಿತ ಸಮಯದೊಳಗೆ ಮಾಹಿತಿಯನ್ನು ನೀಡಲು ಜೆರಾಕ್ಸ್ , ಬೆರಳಚ್ಚು ಮತ್ತು ಗಣಕಯಂತ್ರಗಳ ವ್ಯವಸ್ಥೆ ಏರ್ಪಡಿಸಿದೆ.
4) ಮಾಹಿತಿಯನ್ನು ತ್ವರಿತವಾಗಿ ನೀಡುವ ಸಲುವಾಗಿ ಸಂಸ್ಥೆಯ ಕಡತಗಳನ್ನು ವಹಿಗಳನ್ನು ಕಾಗದ ಪತ್ರಗಳನ್ನು ಸುವ್ಯವಸ್ಥಿತವಾಗಿ ನಿರ್ವಹಿಸಲಾಗಿದೆ. ಅಲ್ಲದೆ ಈ ಬಗ್ಗೆ ಪ್ರಾಚಾರ್ಯರ ಅನುಪಸ್ಥಿತಿಯಲ್ಲಿ ಸಂಸ್ಥೆಯ ಉಪಪ್ರಾಚಾರ್ಯರು ಅಥವಾ ಹಿರಿಯ ಬೋಧಕರು ಅರ್ಜಿಗಳನ್ನು ಸ್ವೀಕರಿಸುವ ಏರ್ಪಾಡು ಮಾಡಲಾಗಿದೆ.

5) ಮಾಹಿತಿ ಪಡೆಯಲು ಸಮಯ: ಬೆಳಿಗ್ಗೆ 10–00 ರಿಂದ 1–30
ಮಧ್ಯಾಹ್ನ 2–30 ರಿಂದ 5–30

**ಸಾರ್ವಜನಿಕ ಮಾಹಿತಿ ಅಧಿಕಾರಿಗಳು:**

1) ಸಾರ್ವಜನಿಕ ಮಾಹಿತಿ ಅಧಿಕಾರಿ: ಶ್ರೀ ಎನ್.ಎಸ್.ಚಂದ್ರಶೇಖರ್, ಪ್ರಾಚಾರ್ಯರು ಜಿಲ್ಲಾ ತರಬೇತಿ ಸಂಸ್ಥೆ, ಹಾಸನ.
2) ಸಹಾಯಕ ಸಾರ್ವಜನಿಕ ಅಧಿಕಾರಿ, ಉಪ ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ಹಾಸನ. ದೂರವಾಣಿ ಸಂಖ್ಯೆ: 268030.
3) ಮೇಲ್ಮನವಿ ಪ್ರಾಧಿಕಾರ : ಮಹಾ ನಿರ್ದೇಶಕರು, ತರಬೇತಿ ಆಡಳಿತ ತರಬೇತಿ ಸಂಸ್ಥೆ, ಲಲಿತಮಹಲ್ ರಸ್ತೆ, ಮೈಸೂರು–570 011, ದೂರವಾಣಿ ಸಂಖ್ಯೆ 0821–2443839, 443264.

**ಎನ್.ಎಸ್. ಚಂದ್ರಶೇಖರ್**

ಪಿ.ಆರ್.807

ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ,
ಎಂ.ಜಿ.ರಸ್ತೆ, ರವೀಂದ್ರನಗರ, ಹಾಸನ.

**ಕರ್ನಾಟಕ ಸರ್ಕಾರ**

**ಕಂದಾಯ ಇಲಾಖೆ**

**ಸಾರ್ವಜನಿಕ ಪ್ರಕಟಣೆಗಾಗಿ**

**ಮಾಹಿತಿ ಹಕ್ಕು ಅಧಿನಿಯಮ–2005 (ಭಾರತ ಸರ್ಕಾರ)**

**ಉಪವಿಭಾಗಾಧಿಕಾರಿಗಳ ಕಛೇರಿ, ಸಾಗರ ಉಪವಿಭಾಗ, ಸಾಗರ**

**2009–10**

1) **ಕಲಂ 4(1)ಬಿ (i): ಕಛೇರಿಯ ವ್ಯವಸ್ಥೆ ಮತ್ತು ಕಾರ್ಯಗಳ ವಿವರ:** ಲಗತ್ತಿಸಿರುವ ಅನುಬಂಧ–1ಎ ಮತ್ತು 1ಬಿ ರಂತೆ.
2) **ಕಲಂ 4(1)ಬಿ (ii): ಅಧಿಕಾರ ಮತ್ತು ಕರ್ತವ್ಯಗಳು:** ಲಗತ್ತಿಸಿರುವ ಅನುಬಂಧ–2 ರಂತೆ.
3) **ಕಲಂ 4(1) ಬಿ (iii):** ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆ ಮಾರ್ಗಸೂಚಿಗಳನ್ನೊಳಗೊಂಡಂತೆ.

**ನಿರ್ಣಯ ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸುವ ಕಾರ್ಯವಿಧಾನ:**

1. ಉಪವಿಭಾಗಾಧಿಕಾರಿಗಳು ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಮೇಲ್ಕಂಡ ಕಾರ್ಯಗಳಡಿ ಅಂತಿಮ ನಿರ್ಣಯ ತೆಗೆದುಕೊಳ್ಳುವುದು.
2. **ವ್ಯವಸ್ಥಾಪಕರು:** ವಿಷಯ ನಿರ್ವಾಹಕರು ಮಂಡಿಸಿದ ಪ್ರಸ್ತಾವನೆಯನ್ನು ಪರಿಶೀಲಿಸಿ ತೆಗೆದುಕೊಳ್ಳಬಹುದಾದ ಕ್ರಮಗಳ ಬಗ್ಗೆ ತಿಳಿಸಿ ಉಪವಿಭಾಗಾದಿಕಾರಿಗಳವರಿಗೆ ಕಡತ ಸಲ್ಲಿಸುವುದು.
3. **ವಿಷಯ ನಿರ್ವಾಹಕರು** ಕಛೇರಿ ಕಾರ್ಯವಿಧಾನ ಕೈಪಿಡಿಯಂತೆ ಅವರಿಗೆ ವಹಿಸಿದ ಶಾಖೆಗಳಿಗೆ ಸಂಬಂಧಪಟ್ಟ ಕಾನೂನು ಅವಕಾಶ ಪರಿಶೀಲಿಸಿ ಟಿಪ್ಪಣಿಯನ್ನು ವ್ಯವಸ್ಥಾಪಕರವರಿಗೆ ಮಂಡಿಸುವುದು.

**ಕಲಂ 4(1) ಬಿ (iv): ಪ್ರಕಾರ್ಯಗಳ ನಿರ್ವಹಣೆಗೆ ಅಳವಡಿಸಿಕೊಂಡಿರುವ ಸೂತ್ರಗಳು:**

01. ಉಪವಿಭಾಗಾಧಿಕಾರಿಗಳವರು ಆಧ್ಯತೆ ಮೇರೆ ಕಾರ್ಯಗಳನ್ನು ನಿರ್ವಹಿಸುವುದು.
02. ತಾಂತ್ರಿಕ ಸಹಾಯಕರು ಹಾಗೂ ಭೂ ದಾಖಲೆಗಳ ಸಹಾಯಕ ನಿರ್ದೇಶಕರ ಹುದ್ದೆ ಖಾಲಿ ಇರುತ್ತದೆ.
03. ವ್ಯವಸ್ಥಾಪಕರು ಕಛೇರಿ ಕಾರ್ಯ ವಿಧಾನದ ಕೈಪಿಡಿಯಂತೆ ಕಾರ್ಯಗಳನ್ನು ನಿರ್ವಹಿಸುವುದು.
04. ಪ್ರಥಮ ದರ್ಜೆ ಸಹಾಯಕರು ಕಛೇರಿ ಕಾರ್ಯ ವಿಧಾನದ ಕೈಪಿಡಿಯಂತೆ ಕಾರ್ಯಗಳನ್ನು ನಿರ್ವಹಿಸುವುದು.
05. ದ್ವಿತೀಯ ದರ್ಜೆ ಸಹಾಯಕರು ಕಛೇರಿ ಕಾರ್ಯ ವಿಧಾನದ ಕೈಪಿಡಿಯಂತೆ ಕಾರ್ಯಗಳನ್ನು ನಿರ್ವಹಿಸುವುದು.
06. ಶೀಘ್ರಲಿಪಿಗಾರರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಬೆರಳಚ್ಚುಗಾರರು ನ್ಯಾಯಾಲಯದ ಆದೇಶ, ಕಛೇರಿ ಪತ್ರವ್ಯವಹಾರಗಳ ಗಣಕೀಕರಣ ಕಾರ್ಯ, ಉಪವಿಭಾಗಾಧಿಕಾರಿಗಳವರ ದಿನಚರಿ ನಿರ್ವಹಣೆ ಕಾರ್ಯ ನಿರ್ವಹಿಸುವುದು.
07. ದ್ವಿತೀಯ ದರ್ಜೆ ಭೂ ಮಾಪಕರ ಹುದ್ದೆ ಖಾಲಿ ಇರುತ್ತದೆ.
08. ಬೆರಳಚ್ಚುಗಾರರು ಎಲ್ಲಾ ಶಾಖೆಯ ಪತ್ರ ವ್ಯವಹಾರಗಳು ಹಾಗೂ ಆದೇಶಗಳನ್ನು ಬೆರಳಚ್ಚು ಮಾಡುವುದು.
09. ನಿಯೋಜಿತ ಗ್ರಾಮಲೆಕ್ಕಿಗರು ಉಪವಿಭಾಗಾಧಿಕಾರಿಗಳೊಂದಿಗೆ ಪ್ರವಾಸ ಮಾಡುವುದಲ್ಲದೆ, ತಾತ್ಕಾಲಿಕ ಪ್ರವಾಸ ಕಾರ್ಯಕ್ರಮ, ಸ್ಥಳ ತನಿಖಾ ಕಡತಗಳು, ದೂರವಾಣಿ ಸಂದೇಶ & ಫ್ಯಾಕ್ಸ್ ಸಂದೇಶಗಳ ನಿರ್ವಹಣೆ ಕಾರ್ಯ ನಿರ್ವಹಿಸುವುದು.
10. ವಾಹನ ಚಾಲಕರು, ವಾಹನ ಚಾಲನೆ ಹಾಗೂ ನಿರ್ವಹಣೆ ಮಾಡುವುದು.
11. ದಫೇದಾರ್‌ರು ವಹಿಸಿದ ಕೆಲಸಗಳ ಬಗ್ಗೆ ಆಯಾ ದಿನದಂದೇ ಕೆಲಸ ನಿರ್ವಹಿಸುವುದು.
12. ಡಿ ಗ್ರೂಪ್ ನೌಕರರಿಗೆ ವಹಿಸಿದ ಕೆಲಸಗಳ ಬಗ್ಗೆ ಆಯಾ ದಿನದಂದೇ ಕೆಲಸ ನಿರ್ವಹಿಸುವುದು.

13. ಬಾಂದ್ ಜವಾನ– ಕಛೇರಿಯಲ್ಲಿ ಡಿ ದರ್ಜೆ ನೌಕರನಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

**4(1) ಬಿ (v): ಇಲಾಖೆಯಲ್ಲಿನ ನೌಕರರು ಪ್ರಕಾರ್ಯಗಳ ನಿರ್ವಹಣೆಗೆ ಬಳಸುತ್ತಿರುವ ಇಲಾಖೆಯಲ್ಲಿರುವ ನಿಬಂಧನೆಗಳು, ಸೂಚನೆಗಳು, ಕೈಪಿಡಿಗಳು ಮತ್ತು ದಾಖಲೆಗಳು:**

01. ಕರ್ನಾಟಕ ಭೂ ಕಂದಾಯ ಅಧಿನಿಯಮ 1964
02. ಕರ್ನಾಟಕ ಭೂ ಕಂದಾಯ ನಿಯಮ 1966
03. ಕರ್ನಾಟಕ ಭೂ ಮಂಜೂರಾತಿ ನಿಯಮ 1969
04. ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961
05. ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ (ಹಲವು ಜಮೀನುಗಳ ಪ್ರಭಾರ ನಿಷೇಧ) ಅಧಿನಿಯಮ 1978 ನಿಯಮ 1979
06. ಭೂ ಸ್ವಾಧೀನ ಅಧಿನಿಯಮ 1894
07. ಮತದಾರರ ನೊಂದಣಿ ನಿಯಮ 1960
08. ಕರ್ನಾಟಕ ಸಾರ್ವಜನಿಕ ಅಫೆನ್ಸ್‌ಗಳು ಅಧಿಕೃತ ಅನುಭವದಾರರನ್ನು ಹೊರಹಾಕುವುದು 1974.
09. ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993
10. ಕರ್ನಾಟಕ ನಾಗರೀಕ ಸೇವಾ ನಿಯಮ 1958
11. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957
12. ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 1956
13. ಸಿವಿಲ್ ಪ್ರಕಿಯಾ ಸಂಹಿತೆ 1908
14. ದಂಡ ಪ್ರಕಿಯಾ ಸಂಹಿತೆ 1974
15. ಕರ್ನಾಟಕ ಪೊಲೀಸ್ ಅಧಿನಿಯಮ 1963
16. ಭಾರತ ಸಾಕ್ಷ್ಯ ಅಧಿನಿಯಮ 1972
17. ಕಾಲಪರಿಮಿತಿ ಅಧಿನಿಯಮ 1963
18. ಕರ್ನಾಟಕ ನೀರಾವರಿ ಅಧಿನಿಯಮ 1965
19. ಕರ್ನಾಟಕ ನೀರಾವರಿ (ನೀರಿನ ಕರ ಆಕರಣ) ಅಧಿನಿಯಮ 1965
20. ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡಗಳ (ದೌರ್ಜನ್ಯ) ಅಧಿನಿಯಮ 1989
21. ಜೀತದಾಳು ಪದ್ಧತಿ ಅಧಿನಿಯಮ 1976
22. ವಕ್ಫ್ ಅಧಿನಿಯಮ 1954
23. ಅಪರಾಧಿಕ ಕಾನೂನು ಮತ್ತು ಕೈದಿಗಳನ್ನು ಗುರುತಿಸುವುದು (ಕರ್ನಾಟಕ ವ್ಯಾಪ್ತಿ ಮತ್ತು ತಿದ್ದುಪಡಿ)ಅಧಿನಿಯಮ 1975
24. ಕರ್ನಾಟಕ ಆರ್ಥಿಕ ಸಂಹಿತೆ
25. ಮಾಹಿತಿ ಹಕ್ಕು ಅಧಿನಿಯಮ, 2005
26. ಸಾದಿಲ್ವಾರು ವೆಚ್ಚ ನಿಯಮ (ಎಂ.ಸಿ.ಇ.)
27. ಕರ್ನಾಟಕ ಪುರಸಭೆ ಅಧಿನಿಯಮ 1964.

**4(1) ಬಿ VI: ಇಲಾಖೆ ಹೊಂದಿರುವ ಅಥವಾ ಇಲಾಖೆಯ ಸ್ವಾಧೀನದಲ್ಲಿರುವ ದಸ್ತಾವೇಜುಗಳ ಪಟ್ಟಿ:**

ಅನುಬಂಧ–1ಬಿ ರಲ್ಲಿ ಹೇಳಿದ ಶಾಖೆಗಳ ವಿಷಯ ವಹಿ ಮತ್ತು ವಿಲೇವಾರಿ ಕಡತಗಳು.

**ಪ್ರಗತಿ ತ:ಖ್ತೆಗಳು:** ಉಪವಿಭಾಗದ ಡಿ.ಸಿ.ಬಿ., ಹಾಜರಾತಿ ವಹಿ, ಸಾಂದರ್ಭಿಕ ರಜೆ ವಹಿ, ವ್ಯವಹಾರಿಕ ಅಂಕಿಅಂಶಗಳು, ವೇತನ ಬಟವಾಡೆ ವಹಿ, ವೇತನ ಬಡ್ತಿ ವಹಿ, ನಗದು ಪುಸ್ತಕ ವಹಿ, ಪೀಠೋಪಕರಣಗಳ ವಹಿ, ಗ್ರಂಥಾಲಯದ ವಹಿ, ಅಭಿಲೇಖಾಲಯದ ಲೇಖನ ಸಾಮಗ್ರಿ ದಾಸ್ತಾನು ವಹಿ ಮತ್ತು ವಿತರಣೆ ವಹಿ.

**4(1) ಬಿ VII:** ಕಾರ್ಯಮಿತಿಯನ್ನು ರೂಪಿಸಲು ಅಥವಾ ಅನುಷ್ಠಾನಗೊಳಿಸುವ ಬಗ್ಗೆ ಜನ ಪ್ರತಿನಿಧಿಗಳ ಜೊತೆ ಸಮಾಲೋಚಿಸಲು ಅಥವಾ ಪ್ರಾತಿನಿಧ್ಯಕ್ಕೆ ಇರುವ ವ್ಯವಸ್ಥೆಗಳ ವಿವರಗಳು: ಇಲ್ಲಾ.

**4(1) ಬಿ VIII:** ಸಲಹೆಯನ್ನು ಪಡೆಯುವ ಸಂಬಂಧದಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚಿನ ವ್ಯಕ್ತಿಗಳು ಇರುವಂತೆ ರಚಿಸಿರುವ ಮಂಡಳಿಗಳು ಷರತ್ತುಗಳು, ಸಮಿತಿಗಳು ಮತ್ತು ಇತರೆ ಸಂಸ್ಥೆಗಳು ಮತ್ತು ಅವುಗಳು ನಡೆಸುವ ಸಭೆಗಳು, ಸಾರ್ವಜನಿಕರಿಗೆ ಮುಕ್ತವೇ ಅಥವಾ ಅಂತಹ ಸಭೆಗಳ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುವುದೇ?

ಸಾಗರ ನಗರ ಸಭೆಗೆ ಆಡಳಿತಾಧಿಕಾರಿ, ಸಾಗರ ತಾಲ್ಲೂಕಿನ ನಮೂನೆ 7ಎ ಪ್ರಕರಣಗಳ ಪ್ರಾಧಿಕೃತ ಅಧಿಕಾರಿ, ಸಾಗರ ಹಾಗೂ ಹೊಸನಗರ ತಾಲ್ಲೂಕಿನ ಭೂ ನ್ಯಾಯ ಮಂಡಳಿಗೆ ಅಧ್ಯಕ್ಷರು ಹಾಗೂ ಸಾಗರ ಉಪವಿಭಾಗದ ಸಾಗರ,

ಸೊರಬ, ಹೊಸನಗರ ಹಾಗೂ ಶಿಕಾರಿಪುರ ತಾಲ್ಲೂಕುಗಳ ರೈತ ಆತ್ಮಹತ್ಯೆ ತಾಲ್ಲೂಕು ಸಮಿತಿಗಳ ಅಧ್ಯಕ್ಷರಾಗಿದ್ದು, ಸದರಿ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುತ್ತವೆ.

**4(1) ಬಿ IX: ಅಧಿಕಾರಿಗಳ ಮತ್ತು ನೌಕರರ ನಿರ್ದೇಶಿಕೆ (Directory):**

| ಕ್ರ. ಸಂ. | ಅಧಿಕಾರಿಗಳ & ನೌಕರರ ಹೆಸರು ಶ್ರೀಯುತರುಗಳಾದ: | ಪದನಾಮ |
|---|---|---|
| 1. | ಡಾ॥ ಪ್ರವೀಣ್ ಕುಮಾರ್ ಜಿ.ಎಲ್., ಕೆ.ಎ.ಎಸ್., | ಉಪವಿಭಾಗಾಧಿಕಾರಿ, ಸಾಗರ ಉಪವಿಭಾಗ, ಸಾಗರ |
| 2. | ಎಲ್.ಬಿ.ಚಂದ್ರಶೇಖರ | ವ್ಯವಸ್ಥಾಪಕರು |
| 3. | ಜಿ.ಕೃಷ್ಣಪ್ಪ | ಪ್ರಥಮ ದರ್ಜೆ ಸಹಾಯಕ |
| 4. | ಪಿ.ಸೋಮಶೇಖರ | ಪ್ರಥಮ ದರ್ಜೆ ಸಹಾಯಕ |
| 5. | ಬಿ.ಸತೀಶ | ಪ್ರಥಮ ದರ್ಜೆ ಸಹಾಯಕ |
| 6. | ಬಿ.ಎನ್.ಕೃಷ್ಣಮೂರ್ತಿ (ನಿಯೋಜನೆ ಮೇರೆಗೆ–ಸೊರಬದಿಂದ) | ಪ್ರಥಮ ದರ್ಜೆ ಸಹಾಯಕ |
| 7. | ಟಿ.ಪರಮೇಶ್ವರ (ನಿಯೋಜನೆ ಮೇರೆಗೆ) | ದ್ವಿತೀಯ ದರ್ಜೆ ಸಹಾಯಕ |
| 8. | ಕಲ್ಲಪ್ಪ ಮೆಣಸಿನಾಳ್ (ನಿಯೋಜನೆ ಮೇರೆಗೆ ಸಾಗರ ತಾಲ್ಲೂಕ್ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ) | ದ್ವಿತೀಯ ದರ್ಜೆ ಸಹಾಯಕ |
| 9. | ಶ್ರೀಮತಿ ಮಮತಾ ಜಿ.ಶರ್ಮಾ | ದ್ವಿತೀಯ ದರ್ಜೆ ಸಹಾಯಕ |
| 10. | ಬಿ.ಎಸ್.ರವೀಂದ್ರನಾಥ್ | ಬೆರಳಚ್ಚುಗಾರ |
| 11. | ಎಂ.ಆರ್.ನರಸಿಂಹ ಮೂರ್ತಿ | ಬೆರಳಚ್ಚುಗಾರ |
| 12. | ಬಿ.ಚನ್ನಕೇಶವ(ನಿಯೋಜನೆ ಮೇರೆಗೆ) | ಗ್ರಾಮಲೆಕ್ಕಿಗ (ನಿಯೋಜನೆ ಮೇರೆಗೆ) |
| 13. | ನಾರಾಯಣ | ವಾಹನ ಚಾಲಕ(ನಿಯೋಜನೆ ಮೇರೆಗೆ ಹೊಸನಗರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ) |
| 14. | ಮೇಗ್ಯಾ ನಾಯ್ಕ್ (ನಿಯೋಜನೆ ಮೇರೆಗೆ) | ವಾಹನ ಚಾಲಕ (ಹೊಸನಗರದಿಂದ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾರೆ) |
| 15. | ಷಣ್ಮುಕ (ನಿಯೋಜನೆ ಮೇರೆಗೆ) | ವಾಹನ ಚಾಲಕ (ಪಂ.ರಾ.ಇಂ. ಇಲಾಖೆಯಿಂದ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾರೆ) |
| 16. | ಮರಿಯಪ್ಪ | ದಫೇದಾರ್ |
| 17. | ಎಲ್.ಮಹಾದೇವಪ್ಪ | ಡಿ ಗ್ರೂಪ್ ನೌಕರ |
| 18. | ಕೆ.ಚೌಡಪ್ಪ | ಡಿ ಗ್ರೂಪ್ ನೌಕರ |
| 19. | ದಾನಪ್ಪ | ಬಾಂದ್ ಜವಾನ |

**4(1) ಬಿ X:** ಅಧಿಕಾರಿ / ನೌಕರರ ಹುದ್ದೆಯ ಹೆಸರು ಮತ್ತು ನಿವ್ವಳ ಸಂಬಳ:

ವಿವರ ಅನುಬಂಧ–3 ಲಗತ್ತಿಸಿದೆ.

**4(1)ಬಿ XI ಯೋಜನೆ ವಿವರಗಳು:** ಪ್ರಸ್ತಾವಿಕ ವೆಚ್ಚಗಳು ಮತ್ತು ಬಟವಾಡೆ ಮಾಡಿದ ವರದಿಗಳನ್ನೊಳಗೊಂಡಂತೆ ಪ್ರತಿ ಏಜೆನ್ಸಿಗೂ ಹಂಚಿಕೆ ಮಾಡಿದ ಆಯವ್ಯಯ:

ಶೀರ್ಷಿಕೆವಾರು ಅನುದಾನ ಬಿಡುಗಡೆಯಾದ ವಿವರ ಅನುಬಂಧ–4 ಲಗತ್ತಿಸಿದೆ.

**4(1)ಬಿ XII:** ಹಣ ಹಂಚಿಕೆ ಮಾಡಿ ವಿವರಗಳನ್ನೊಳಗೊಂಡಂತೆ ಕಾರ್ಯಕ್ರಮಗಳು ಫಲಾನುಭವಿಗಳ ವಿವರ ಹಾಗೂ ಸಹಾಯ ಧನ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ವಿಧಾನ:

ಯಾವುದೂ ಇರುವುದಿಲ್ಲ.

**4(1) ಬಿ XIII:** ರಿಯಾಯಿತಿಗಳು, ಅಪ್ಪಣೆ ಪತ್ರಗಳು ಅಥವಾ ಅಧಿಕಾರ ಪತ್ರಗಳನ್ನು ಪಡೆದವರ ವಿವರಗಳು:

ಯಾವುದೇ ರಿಯಾಯಿತಿಗಳು, ಅಪ್ಪಣೆ ಪತ್ರಗಳನ್ನು ಈ ಪ್ರಾಧಿಕಾರದಿಂದ ಮಂಜೂರು ಮಾಡಿರುವುದಿಲ್ಲ.

**4(1) ಬಿ XVI:** ಉಪವಿಭಾಗದಲ್ಲಿ ದೊರೆಯುವ ಅಥವಾ ಹೊಂದಿರುವ ವಿದ್ಯುನ್ಮಾನ ರೂಪಕ್ಕೆ ಇಳಿಸಿರುವ ಮಾಹಿತಿಗಳ ವಿವರಗಳು: ಯಾವುದೂ ಇರುವುದಿಲ್ಲ.

**4(1) ಬಿ XV:** ಗ್ರಂಥಾಲಯವನ್ನು ಸಾರ್ವಜನಿಕರ ಬಳಕೆಗೆ ನಿರ್ವಹಿಸಿದ್ದಲ್ಲಿ, ಗ್ರಂಥಾಲಯವು ಅಥವಾ ವಾಚನಾಲಯವು ಕಾರ್ಯನಿರ್ವಹಿಸುವ ಸಮಯ ಹಾಗೂ ಸಾರ್ವಜನಿಕರಿಗೆ ಮಾಹಿತಿಯನ್ನು ಪಡೆಯಲು ಇರುವ ಅನುಕೂಲತೆಗಳ ವಿವರಗಳು:

ಸಾರ್ವಜನಿಕರ ಬಳಕೆಗೆ ಗಂಥಾಲಯ ನಿರ್ವಹಿಸಿಲ್ಲ.

**4(1) ಬಿ XVI:** ಸಾರ್ವಜನಿಕ ಸಂಪರ್ಕಾಧಿಕಾರಿಗಳ ಹೆಸರು, ಪದನಾಮ ಮತ್ತು ಇತರೆ ವಿವರಗಳು.

| ಕ್ರ. ಸಂ. | ಸಾರ್ವಜನಿಕ ಸಂಪರ್ಕಾಧಿಕಾರಿಗಳ ಹೆಸರು: | ಪದನಾಮ | ದೂರವಾಣಿ ಸಂಖ್ಯೆ | |
|---|---|---|---|---|
| | | | ಕಛೇರಿ | ನಿವಾಸ |
| 1. | ಡಾ॥ ಪವೀಣ್ ಕುಮಾರ್ ಜಿ.ಎಲ್., ಕೆ.ಎ.ಎಸ್. | ಉಪವಿಭಾಗಾಧಿಕಾರಿ ಮತ್ತು ಉಪವಿಭಾಗೀಯ ದಂಡಾಧಿಕಾರಿ, ಸಾಗರ ಉಪವಿಭಾಗ, ಸಾಗರ ಮೊಬೈಲ್ ನಂ. 9900214875 | 08183–226601 | 08183–226602 |

**ಅನುಬಂಧ – 1ಎ:**

**ಉಪವಿಭಾಗಾಧಿಕಾರಿಗಳ ಕಛೇರಿಯ ಸಂಘಟನೆಯ ವಿವರ:**

| ಕ. ಸಂ. | ವಿಷಯ ನಿರ್ವಾಹಕರ ಹೆಸರು & ಪದನಾಮ: ಶ್ರೀಯುತರುಗಳಾದ: | ವಹಿಸಲಾದ ವಿಷಯಗಳು |
|---|---|---|
| 1. | ಡಾ॥ ಪವೀಣ್ ಕುಮಾರ್ ಜಿ.ಎಲ್., ಕೆ.ಎ.ಎಸ್. ಉಪವಿಭಾಗಾಧಿಕಾರಿ | 1) ಉಪವಿಭಾಗದ ಸಾಮಾನ್ಯ ಆಡಳಿತ ನಿರ್ವಹಣೆ<br>2) ಕಾನೂನು ಸುವ್ಯವಸ್ಥೆ ಕಾಪಾಡುವುದು<br>3) ಉಪವಿಭಾಗೀಯ ದಂಡಾಧಿಕಾರಿಯಾಗಿ ಕಾರ್ಯನಿರ್ವಹಿಸುವುದು<br>4) ಕಂದಾಯ ನ್ಯಾಯಾಲಯದ ಮೇಲ್ಮನವಿ ಪ್ರಕರಣಗಳ ವಿಲೇವಾರಿ<br>5) ಸಾರ್ವಜನಿಕ ಕುಂದುಕೊರತೆ ನಿವಾರಣೆ<br>6) ಭೂ ಸ್ವಾಧೀನ ಪಕರಣಗಳ ನಡವಳಿಕೆ ನಡೆಸುವುದು<br>7) ಪಿ.ಟಿ.ಸಿ.ಎಲ್. ಪ್ರಕರಣಗಳ ವಿಲೇವಾರಿ<br>8) ಚುನಾವಣಾ ಕೆಲಸ ಕಾರ್ಯಗಳ ನಿರ್ವಹಣೆ ಹಾಗೂ ಮೇಲ್ವಿಚಾರಣೆ.<br>9) ಸಾಗರ ಹಾಗೂ ಹೊಸನಗರ ತಾಲ್ಲೂಕಿನ ಭೂ ನ್ಯಾಯ ಮಂಡಳಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುವುದು<br>10) ಕಲಂ 77ರಡಿ ಸಲ್ಲಿಸಿದ 7ಎ ಅರ್ಜಿ ವಿಲೇವಾರಿ<br>11) ಕರ್ನಾಟಕ ಮುನ್ಸಿಪಲ್ ಕಾಯ್ದೆ ಕಲಂ 306(1)ರಡಿ ಪ್ರಕರಣಗಳ ವಿಲೇವಾರಿ<br>12) ಉಪವಿಭಾಗದ ಸಾಗರ, ಸೊರಬ, ಶಿಕಾರಿಪುರ ಹಾಗೂ ಹೊಸನಗರ ತಾಲ್ಲೂಕುಗಳ ರೈತರ ಆತ್ಮಹತ್ಯೆ ತಾಲ್ಲೂಕು ಸಮಿತಿ ಅಧ್ಯಕ್ಷರಾಗಿ ಕಾರ್ಯನಿರ್ವಹಣೆ.<br>13) ಪಧಾನಮಂತಿಗಳ ವಿದರ್ಭಾ ಮಾದರಿ ರೈತರ ಪ್ಯಾಕೇಜ್ ಅಡಿ ಉಪವಿಭಾಗದ ವ್ಯಾಪ್ತಿಯ ತಾಲ್ಲೂಕುಮಟ್ಟದಲ್ಲಿ ಶಿಫಾರಸ್ಸು ಮಾಡಲಾದ ರೈತರುಗಳಿಗೆ ಧನಸಹಾಯ ಬಿಡುಗಡೆ ಕಾರ್ಯ.<br>14) ಪ್ರಕೃತಿ ವಿಕೋಪ ನಿರ್ವಹಣೆ. |
| 2. | ಎಲ್.ಬಿ.ಚಂದಶೇಖರ ವ್ಯವಸ್ಥಾಪಕರು | 1. ಆಡಳಿತ ಶಾಖೆ<br>2. ಸಾರ್ವಜನಿಕ ಕುಂದು ಕೊರತೆ<br>3. ಮಾಹಿತಿ ಹಕ್ಕು ಅದಿನಿಯಮ ಶಾಖೆ |
| 3. | ಜಿ. ಕೃಷ್ಣಪ್ಪ, ಪ್ರ.ದ.ಸ. | 1. ಸಿಬ್ಬಂದಿ ಶಾಖೆ<br>2. ಶಿಸ್ತು ಪಕರಣಗಳು<br>3. ವೇತನ ಬಿಲ್ ತಯಾರಿಸುವುದು<br>4. ಅಧೀನ ಕಛೇರಿಗಳ ಸಿಬ್ಬಂದಿ ಶಾಖೆಯ ಪ್ರಕರಣಗಳ ವಿಲೇವಾರಿ<br>5. ಪಯಾಣ ಭತ್ಯೆ ಬಿಲ್ ಗಳ ನಿರ್ವಹಣೆ<br>6. ಡಿ.ಸಿ ಬಿಲ್‌ಗಳ ನಿರ್ವಹಣೆ<br>7. ಪುರಸಭೆ<br>8. ಇನಾಂ ಪಕರಣಗಳು<br>9. ಚುನಾವಣೆ ವಿಷಯಗಳು<br>10. ವಾಹನದ ಲಾಗ್ ಪುಸ್ತಕ ನಿರ್ವಹಣೆ |

| ಕ್ರ. ಸಂ. | ವಿಷಯ ನಿರ್ವಾಹಕರ ಹೆಸರು & ಪದನಾಮ: ಶ್ರೀಯುತರುಗಳಾದ: | ವಹಿಸಲಾದ ವಿಷಯಗಳು |
|---|---|---|
| 4. | ಪಿ.ಸೋಮಶೇಖರ<br>ಪ್ರ.ದ.ಸ. | 1. ಭೂ ಸ್ವಾಧೀನ ಪ್ರಕರಣಗಳು<br>2. ಭೂ ಪರಿವರ್ತನೆ<br>3. ಆಹಾರ ಮತ್ತು ನಾಗರೀಕ ಸರಬರಾಜು<br>4. ಆಶ್ರಯ<br>5. ಅಧೀನ ಕಛೇರಿಗಳ ತಪಾಸಣೆ ಟಿಪ್ಪಣಿ ತಯಾರಿಕೆ |
| 5. | ಸತೀಶ ಬಿ.ಜಿ., ಪ್ರ.ದ.ಸ. | 1. ಕಂದಾಯ ಮೇಲ್ಮನವಿ ಪ್ರಕರಣಗಳು<br>2. ಹಕ್ಕು ದಾಖಲೆ<br>3. ಅರಣ್ಯ ಪ್ರಕರಣಗಳು<br>4. ಅಭಿಲೇಖಾಲಯ<br>5. ನಕಲು ವಹಿ |
| 6. | ಬಿ.ಎನ್.ಕೃಷ್ಣಮೂರ್ತಿ, ಪ್ರ.ದ.ಸ.<br>(ನಿಯೋಜನೆ ಮೇರೆ) | 1) ಅನುವಂಶಿಕ ಕಾಯ್ದೆ ರದ್ಧಿಯಾತಿ ಪ್ರಕರಣಗಳು<br>2) ನೈಸರ್ಗಿಕ ವಿಕೋಪ<br>3) ವಿಫಲ ಬಾವಿ<br>4) ರೈತರ ವಿದರ್ಭ ಮಾದರಿ ಪ್ಯಾಕೇಜ್<br>5) ಜೀತ ವಿಮುಕ್ತಿ<br>6) ಸ್ಥಳೀಯ ಪ್ರದೇಶಾಭಿವೃದ್ಧಿ ಅನುದಾನದ ಕಾಮಗಾರಿಗಳು<br>7) ಬಾಲ ಕಾರ್ಮಿಕರ ಪ್ರಕರಣಗಳು |
| 7. | ಟಿ.ಪರಮೇಶ್ವರ,<br>ದ್ವಿ.ದ.ಸ.<br>(ನಿಯೋಜನೆ ಮೇರೆ) | 1) ನ್ಯಾಯಾಂಗ ಶಾಖೆ<br>2) ಅಸ್ವಾಭಾವಿಕ ಮರಣ ಪ್ರಕರಣಗಳು<br>3) ಭೂಮಿ ಶಾಖೆ<br>4) ಪಿ.ಟಿ.ಸಿ.ಎಲ್. ಪ್ರಕರಣಗಳು<br>5) ಭೂ ಸುಧಾರಣೆ<br>6) 79ಎ & ಬಿ (ಭೂ ಸುಧಾರಣೆ)<br>7) ಇತರೆ ವಿಷಯ ವಹಿ<br>8) ಬರಗಾಲ ಕಾಮಗಾರಿಗಳು<br>9) ಮಾಹಿತಿ ಹಕ್ಕು ಅಧಿನಿಯಮದನ್ವಯ ದಾಖಲೆಗಳನ್ನು ಸಾರ್ವಜನಿಕರಿಗೆ ತೋರಿಸುವುದು |
| 8. | ಶ್ರೀಮತಿ ಮಮತಾ ಜಿ.ಶರ್ಮಾ,<br>ದ್ವಿ.ದ.ಸ. | 1) ಗ್ರಾಮಪಂಚಾಯ್ತಿಗಳು<br>2) ಹಕ್ಕು ದಾಖಲೆ (ಗಣಕೀಕರಣ)<br>3) ಆಮದು ಮತ್ತು ರವಾನೆ ಶಾಖೆ<br>4) ಮುಜರಾಯಿ ಪ್ರಕರಣಗಳು |
| 9. | ಬಿ.ಎಸ್.ರವೀಂದ್ರ ನಾಥ್,<br>ಬೆರಳಚ್ಚುಗಾರ | ನ್ಯಾಯಾಲಯದ ಆದೇಶ, ಕಛೇರಿ ಪತ್ರವ್ಯವಹಾರಗಳ ಗಣಕೀಕರಣ ಕಾರ್ಯ, ಉಪವಿಭಾಗಾಧಿಕಾರಿಗಳವರ ದಿನಚರಿ ನಿರ್ವಹಣೆ ಕಾರ್ಯ |
| 10. | ಎಂ.ಆರ್.ನರಸಿಂಹ ಮೂರ್ತಿ,<br>ಬೆರಳಚ್ಚುಗಾರ | ಎಲ್ಲಾ ಶಾಖೆಯ ಪತ್ರ ವ್ಯವಹಾರಗಳು ಹಾಗೂ ಆದೇಶಗಳನ್ನು ಬೆರಳಚ್ಚು ಮಾಡುವುದು. |
| 11. | ಬಿ.ಚನ್ನಕೇಶವ, ಗ್ರಾ.ಲೆ.<br>(ನಿಯೋಜನೆ ಮೇರೆ) | ತಾತ್ಕಾಲಿಕ ಪ್ರವಾಸ ಕಾರ್ಯಕ್ರಮ, ಸ್ಥಳ ತನಿಖೆಗಳು, ದೂರವಾಣಿ ಸಂದೇಶಗಳು & ಫ್ಯಾಕ್ಸ್ ಸಂದೇಶಗಳು, ಉಪವಿಭಾಗಾಧಿಕಾರಿಗಳೊಂದಿಗೆ ಪ್ರವಾಸ. |
| 12. | ಮೇಗ್ಯಾ ನಾಯ್ಕ್ | ವಾಹನ ಚಾಲನೆ ಕಾರ್ಯನಿರ್ವಹಿಸುವುದು. |

